ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಮಕ್ಕಳಿಗೆ ಕತೆಗಳೆಂದರೆ ಬಹಳ ಇಷ್ಟ. ಎಂತಹ ಕತೆಗಳನ್ನಾದರೂ ಅವರು ಆಸಕ್ತಿಯಿಂದ ಓದುತ್ತಾರೆ. ಕೆಲವೊಮ್ಮೆ ಕತೆಯ ಪಾತ್ರಗಳನ್ನು ಅಭಿನಯಿಸಿಯೂ ತೋರಿಸುತ್ತಾರೆ. ಚಿಕ್ಕ ಮಕ್ಕಳ ಮನಸ್ಸು ಬಹಳ ಕೋಮಲ. ಆ ಪ್ರಾಯದಲ್ಲಿ ಅವರ ಮನ-ಮಸ್ತಿಷ್ಕಗಳಿಗೆ ಏನನ್ನು ತುರುಕಿಸಲಾಗುತ್ತದೋ ಅದರ ಪ್ರಭಾವ ಬದುಕಿನಾದ್ಯಂತ ಗೋಚರಿಸುತ್ತದೆ. ಆದುದರಿಂದ ಅವರ ಆಲೋಚನೆಗಳಿಗೆ ಸರಿಯಾದ ದಿಕ್ಕು ನೀಡಲು ಮತ್ತು ಅವರನ್ನು ಉತ್ತಮ ನಾಗರಿಕರನ್ನಾಗಿ ಬೆಳೆಸಲು ಅವರಿಗೆ ನೈತಿಕ ಮತ್ತು ಮೌಲ್ಯಾಧಾರಿತ ಶಿಕ್ಷಣ ನೀಡಬೇಕಾದುದು ಅಗತ್ಯ.

"ಹೇಂಟೆ ಮತ್ತು ಮರಿಗಳು" ಎಂಬ ಈ ಕೃತಿಯಲ್ಲಿ ಯುವಲೇಖಕ ಶೌಕತ್ ಅಲಿಯವರು ಸಣ್ಣಸಣ್ಣ ಕತೆಗಳ ಮೂಲಕ ಮಕ್ಕಳಿಗೆ ನೈತಿಕತೆಯನ್ನು ಕಲಿಸಲು ಶ್ರಮಿಸಿದ್ದಾರೆ. ಮಕ್ಕಳ ಮಾನಸಿಕತೆಯನ್ನು ಮುಂದಿಟ್ಟು ರಚಿಸಲಾದ ಈ ಕಥಾ ಸಂಕಲನದಲ್ಲಿರುವ ಪ್ರತಿಯೊಂದು ಕತೆಯೂ ಒಂದನ್ನೊಂದು ಮೀರಿಸುವಂತಹದ್ದು. ಇದು ಮಕ್ಕಳಿಗೆ ಮಾತ್ರವಲ್ಲ, ಕತೆ ಓದುವ ಹವ್ಯಾಸವಿರುವ ಎಲ್ಲ ಪ್ರಾಯದವರಿಗೂ ಉಪಯುಕ್ತವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# 1 ಉತ್ತಮ ಹುಡುಗ

**ಶು**ಜ್ಜ ಬಹಳ ಸಂಭ್ರಮದಲ್ಲಿದ್ದನು. ಶಾಲೆಯ ವಾರ್ಷಿಕೋತ್ಸವ. ಈ ನಿಮಿತ್ತ ಬೇಗನೇ ಎದ್ದು ತಯಾರಾಗಿ ನಿಂತಿದ್ದನು. ಶಾಲೆಯಲ್ಲಿ ಮಕ್ಕಳೆಲ್ಲರೂ ಬಹಳ ಉತ್ಸುಕರಾಗಿದ್ದರು. ಬಹುಮಾನ ವಿತರಣೆ, ನಾಟಕ, ನೃತ್ಯ, ಡ್ರಿಲ್ ಹೀಗೆ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಇದೇ ಸಂದರ್ಭದಲ್ಲಿ 'ವರ್ಷದ ಉತ್ತಮ ಹುಡುಗ' ಎಂಬ ಪ್ರಶಸ್ತಿಯನ್ನು ವರ್ಷಂಪ್ರತಿ ವಿದ್ಯಾರ್ಥಿಗಳ ನಡವಳಿಕೆ ನೋಡಿ ಕೊಡುತ್ತಿದ್ದರು. ವಿದ್ಯಾರ್ಥಿಗಳೆಲ್ಲರೂ ಕುತೂಹಲದಿಂದ ಮುಖ್ಯೋಪಾಧ್ಯಾಯರ ಮುಖವನ್ನೇ ನೋಡುತ್ತಿದ್ದರು. ಶುಜ್ಜ, ಚಂದ್ರ, ವಿವೇಕ್ ಮೊದಲಾದವರು ಬಹಳ ಉತ್ಸಾಹದಿಂದ ಕಾತರರಾಗಿದ್ದರು. ಮುಖ್ಯೋಪಾಧ್ಯಾಯರು ಒಮ್ಮೆಲೇ 'ವರ್ಷದ ಉತ್ತಮ ಹುಡುಗ ಮುಖ್ತಾರ್' ಎಂದು ಘೋಷಿಸಿಯೇ



ಬಿಟ್ಟರು. ಎಲ್ಲರಿಗೂ ಅಚ್ಚರಿಯಾಯಿತು. ಮುಖ್ತಾರ್! ಮುಖ್ತಾರ್!' ಎಲ್ಲರ ಬಾಯಲ್ಲೂ ಆಶ್ಚರ್ಯದಿಂದ ಈ ಸ್ವರ ಹೊರ ಬಂದಿತು. ಮುಖ್ತಾರ್ ಶಾಲೆಯಲ್ಲಿ ಅತೀ ತುಂಟ ಹುಡುಗ ಎಂದು ಗುರುತಿಸಲ್ಪಟ್ಟಿದ್ದ. ಏಕೆಂದರೆ ದಿನಾಲೂ ಮಧ್ಯಾಹ್ನ ಕ್ಲಾಸಿಗೆ ತಡವಾಗಿ ಬರುತ್ತಿದ್ದ. ಹಲವು ಬಾರಿ ಅಧ್ಯಾಪಕರಿಂದ ಬೆನ್ನು ಕೂಡಾ ಕಾಯಿಸಿದ್ದನು. ಪ್ರಶ್ನಿಸಿದರೆ ಉತ್ತರ ಕೊಡದೆ ಮೌನವಾಗಿ ನಿಂತುಕೊಳ್ಳುತ್ತಿದ್ದನು. ಕಲಿಕೆಯಲ್ಲೂ ಮುಂದಿರಲಿಲ್ಲ. ಆದರೆ ಇಂದು 'ವರ್ಷದ ಉತ್ತಮ ಹುಡುಗ' ಎಂಬ ಪ್ರಶಸ್ತಿ ಪಡೆದಿದ್ದಾನೆ. ಶುಜ್ಜನಿಗೆ ಇದರಲ್ಲಿ ಅನ್ಯಾಯವಾಗಿದೆ ಎಂದೆನಿಸಿತು ಮತ್ತು ಅಸೂಯೆಯೂ ಮೂಡಿತು.

ಮುಖ್ಯೋಪಾಧ್ಯಾಯರು ತಮ್ಮ ಮಾತನ್ನು ಮುಂದುವರಿಸಿದರು, "ಈ ಹುಡುಗ ಈ ಶಾಲೆಯ ಅತೀ ತುಂಟ ಹುಡುಗ ಎಂದು ನಾನು ಭಾವಿಸಿದ್ದೆ. ಆದರೆ ಇವನಷ್ಟು ಒಳ್ಳೆಯ ಹುಡುಗ ಶಾಲೆಯಲ್ಲಿ ಬೇರೆ ಯಾರೂ ಇಲ್ಲ ಎಂದೆನಿಸುತ್ತದೆ. ಈತ ದಿನಾಲೂ ಮಧ್ಯಾಹ್ನ ಶಾಲೆಗೆ ತಡವಾಗಿ ಬರುತ್ತಿದ್ದ. ಒಂದು ದಿನ ನಾನು ಈತನಿಗರಿಯದಂತೆ ಈತನನ್ನು ಹಿಂಬಾಲಿಸುತ್ತಾ ಹೋದೆ. ಈತ ವೇಗವಾಗಿ ನಡೆಯುತ್ತಾ ಎಡ ಬದಿಯ ಓಣಿಯೊಳಗೆ ಹೋಗಿ ಒಂದು ಗುಡಿಸಲಿನೊಳಗೆ ಹೊಕ್ಕನು. ಆ ಗುಡಿಸಲನ್ನು ತೆರೆದು ನೋಡಿದಾಗ 'ರಾಮಣ್ಣ! ಹೌದು, ಸಿಪಾಯಿ ರಾಮಣ್ಣ. ಒಂದು ಕಾಲದಲ್ಲಿ ದೇಶಕ್ಕಾಗಿ ಹೋರಾಡಿದವನು. ಆದರೆ ಇಂದು ಕುರುಡನಾಗಿದ್ದಾನೆ. ಯುದ್ಧದಿಂದಾಗಿ ತನ್ನ ಕಾಲನ್ನು ಕಳೆದು ಕೊಂಡಿದ್ದಾನೆ. ಮನೆಯಲ್ಲಿ ಅವನೊಂದಿಗೆ ವೃದ್ಧ ತಾಯಿ ಮಾತ್ರ ಇದ್ದಾರೆ. ಇಂದು ಅವರಿಗೆ ಆಸರೆಯಿಲ್ಲ. ಅವರನ್ನು ನೋಡಲು ಯಾರಿಗೂ ಪುರುಸೊತ್ತಿಲ್ಲ. ಆದರೆ ಮುಖ್ತಾರ್ ತನ್ನ ಮಧ್ಯಾಹ್ನದ ಟಿಫಿನ್ ಬಾಕ್ಸನ್ನು ಅವರಿಗೆ ಕೊಟ್ಟು ಅವರು ತಿಂದು ಕುಡಿದ ನಂತರ ಓಡೋಡಿ ಶಾಲೆಗೆ ಬರುತ್ತಿದ್ದನು. ಈ ಕಾರಣದಿಂದ ಈತ ಶಾಲೆಗೆ ತಡವಾಗಿ ತಲುಪುತ್ತಿದ್ದನು. ದಿನಾ ಪೆಟ್ಟು ತಿಂದನೇ ವಿನಃ ಒಮ್ಮೆಯೂ ಎಲ್ಲಿಗೆ ಹೋಗಿದ್ದೆ ಎಂದು ಬಾಯಿಬಿಟ್ಟು ಹೇಳಿರಲಿಲ್ಲ" ಎಂದು ಹೇಳಿದಾಗಲೇ ಸಭಿಕರಿಂದ ಚಪ್ಪಾಳೆ ಮುಗಿಲೇರಿತು. ಈ ವೃತ್ತಾಂತವನ್ನು ಕೇಳಿದ ಶುಜ್ಜನ ಮನದಲ್ಲಿದ್ದ ಅಸೂಯೆಯೆಲ್ಲಾ ಮಾಯವಾಗಿತ್ತು. ನೇರವಾಗಿ ಬಂದು ಮುಖ್ತಾರ್‌ನನ್ನು ಆಲಿಂಗಿಸಿ, "ಖಂಡಿತವಾಗಿಯೂ ಈ ವರ್ಷದ ಉತ್ತಮ ಹುಡುಗ ನೀನೇ, ಅದರಲ್ಲಿ ಯಾವುದೇ ಸಂಶಯವಿಲ್ಲ" ಎಂದು ಹೇಳಿದನು.

ಆಗ ಮುಖ್ತಾರ್, "ಪ್ರವಾದಿ ಮುಹಮ್ಮದ್(ಸ) ತಮ್ಮ ಯೌವನದಲ್ಲಿ ಹೀಗೆಯೇ ಮಾಡುತ್ತಿದ್ದರು ಎಂದು ನಾನು ಮದ್ರಸದಲ್ಲಿ ಕಲಿತಿದ್ದೇನೆ" ಎಂದು ಹೇಳಿದನು. ಅಂದಿನಿಂದ ಅವರಿಬ್ಬರೂ ಬಹಳ ಆಪ್ತರಾದರು.

❖

## 2 ಕನಸಿನ ಭಾರತ

"**ಕಾ**ಗದ ಬಂತು..." ಎನ್ನುತ್ತಾ ಶುಜ್ಞ ಪೋಸ್ಟ್‌ಮ್ಯಾನ್ ಬಳಿಗೆ ಓಡಿದನು. ಕಾಗದ ಪಡೆದು ತಂದೆಯವರಿಗೆ ಕೊಟ್ಟು, ಮೈದಾನಕ್ಕೆ ಓಡಿದನು. ಅವರು ತೆರೆದು ನೋಡಿದಾಗ, "ನಿಮ್ಮ 'ಕನಸಿನ ಭಾರತ' ಎಂಬ ಕವನ ಸಂಕಲನಕ್ಕೆ ಪ್ರಶಸ್ತಿ ಲಭಿಸಿದೆ. ಈ ಬಾರಿ ಸಾಹಿತ್ಯ ಸಂಘದ ದಶವಾರ್ಷಿಕ ಕಾರ್ಯಕ್ರಮದ ನಿಮಿತ್ತ ಆಯ್ಕೆಗೊಂಡ ಸಂಕಲನಗಳಲ್ಲಿ 'ಅತಿ ಶ್ರೇಷ್ಠ ಕವನ ಸಂಕಲನ' ಎಂಬ ಪ್ರಶಸ್ತಿಯನ್ನು ಪಡೆದಿದೆ. ಆದುದರಿಂದ ಪ್ರಶಸ್ತಿ ಹಾಗೂ 25 ಸಾವಿರ ನಗದು ಸ್ವೀಕರಿಸಲು ದಶವಾರ್ಷಿಕ ಸಮಾರಂಭಕ್ಕೆ ಆದರಪೂರ್ವಕವಾಗಿ ಸ್ವಾಗತಿಸುತ್ತೇವೆ" ಎಂದು ಬರೆದಿತ್ತು. ಪತ್ರ ಓದುತ್ತಿದ್ದಂತೆ ಗತ ನೆನಪುಗಳು ಅವರ ಕಣ್ಣ ಮುಂದೆ ತೇಲಿದವು...

"ಆ ಹುಡುಗ ಶಾಲೆಯೊಂದರಲ್ಲಿ ಕಲಿಯುತ್ತಿದ್ದ. ಒಂದು ದಿನ ಕೂಡಾ ಶಾಲೆ ತಪ್ಪಿಸಿದವನಲ್ಲ. ಆದರೆ ಇಂದು ಶಾಲೆಗೆ ಹೋಗಲು ಹಿಂಜರಿಯುತ್ತಿದ್ದಾನೆ. ಏಕೆಂದರೆ ನಳಿನಿ ಮಿಸ್ ಎಲ್ಲರಿಗೂ ಒಂದೊಂದು ಕವನ ಬರೆದು ತರಲು ಹೇಳಿದ್ದರು. ನಳಿನಿ ಮಿಸ್‌ಗೆ ಹೆದರದವರು ಇಡೀ ಶಾಲೆಯಲ್ಲಿ ಯಾರೂ ಇರಲಿಲ್ಲ. ಅವರು ಕೊಟ್ಟ ಕೆಲಸವನ್ನು ಮಾಡದೆ ಬಂದರೆ ಅವನ ಕತೆ ಮುಗಿದಂತೆ. ಇನ್ನು ತಪ್ಪಿಸಿದವರ ಗತಿ ಅದಕ್ಕಿಂತ ಕೀಳು. ನಳಿನಿ ಮಿಸ್ ಕವನಗಳ ಕುರಿತು ಪಾಠ ಮಾಡುತ್ತಿದ್ದರು. ಈ ನಿಮಿತ್ತ ಕ್ಲಾಸಿನಲ್ಲಿ ಕವಿಗೋಷ್ಠಿಯನ್ನು ಏರ್ಪಡಿಸಿದ್ದರು. ಎಲ್ಲರಲ್ಲೂ ಒಂದೊಂದು ಸ್ವರಚಿತ ಕವನವನ್ನು ಬರೆದು ತರಲು ಹೇಳಿದ್ದರು. ಎಲ್ಲರೂ ಒಂದೊಂದು ಕವನವನ್ನು ಬರೆದು ತಂದಿದ್ದರು. ಆದರೆ ಈ ಹುಡುಗ ಮಾತ್ರ ಒಂದೇ ಒಂದು ಕವನವನ್ನು ಬರೆದಿರಲಿಲ್ಲ. ಹಾಗಂದ ಮಾತ್ರಕ್ಕೆ ಸುಮ್ಮನೆ ಕುಳಿತವನಲ್ಲ. ತನ್ನ ಹತ್ತಿರದ ಗುಡ್ಡ ಪ್ರದೇಶಗಳಿಗೆ ಹೋಗಿ ಪ್ರಕೃತಿಯೊಂದಿಗೆ ಸೇರಿ ಹಲವು ಪುಟಗಳನ್ನು ಗೀಚಿದ್ದನು. ಆದರೂ ಒಂದು ಕವನ ಬಿಡಿ, ಒಂದೇ ಒಂದು ಸಾಲು ಕೂಡಾ ಈತನಿಂದ ರಚಿಸಲು ಸಾಧ್ಯವಾಗಲಿಲ್ಲ. ಈ ಕಾರಣದಿಂದ ಶಾಲೆಗೆ ಹೋಗಲು ಹಿಂಜರಿಯುತ್ತಿದ್ದಾನೆ. ಏನಾದರಾಗಲಿ ತಾನು ಕವನ ಬರೆಯದಿದ್ದರೇನು ಇತರರು ಬರೆದಿರುವರಲ್ಲ, ಅವರ ಕವನ ಕೇಳಿ ನಂತರ ಬರೆಯಬಹುದು" ಎಂದು ತೀರ್ಮಾನಿಸಿ ಧೈರ್ಯ ಮಾಡಿಕೊಂಡು ಶಾಲೆಗೆ ಹೋದನು.



ನಳಿನಿ ಮಿಸ್‌ಗೆ ಈತನ ಸ್ವಭಾವ ಹಿಡಿಸಲಿಲ್ಲ. ಎಲ್ಲರ ಮುಂದೆ ಈತನನ್ನು ಅವಮಾನಿಸಿದರು. ಕವನ ಬರೆಯದೆ ಕ್ಲಾಸಿಗೆ ಬರಕೂಡದು ಎಂದು ಹೊರಗೆ ಕಳುಹಿಸಿದರು. ನಳಿನಿ ಮಿಸ್ ವಿದ್ಯಾರ್ಥಿಗಳಲ್ಲಿ ಬರವಣಿಗೆಯ ಸಾಮರ್ಥ್ಯವನ್ನು ಹುಟ್ಟಿಸಲು ಪ್ರಯತ್ನಿಸುತ್ತಿದ್ದರೇ ವಿನಃ ಯಾವುದೇ ಕೋಪದಿಂದ ಈ ರೀತಿ ಮಾಡುತ್ತಿರಲಿಲ್ಲ. ಶಾಲೆಯಿಂದ ಹೊರಗೆ ಹೋದವನು ಹತ್ತಿರದ ನದಿ, ಗುಡ್ಡ ಪ್ರದೇಶಗಳ ಬಳಿ ತೆರಳಿ ಬರೆಯಲು ಪ್ರಯತ್ನ ಪಟ್ಟನು. ಹಲವು ದಿನ ತರಗತಿಗೆ ಗೈರು ಹಾಜರಾದನೇ ವಿನಃ ಕವನ ಬರೆಯಲು ಅವನಿಂದ ಸಾಧ್ಯವಾಗಲಿಲ್ಲ. ನಳಿನಿ ಮಿಸ್ "ಶಾಲೆ ತಪ್ಪಿಸಬಾರದು, ಪರೀಕ್ಷೆ ಹತ್ತಿರ ಬರುತ್ತಿದೆ. ಶಾಲೆಗೆ ಬರಬೇಕು" ಎಂದು ಕೆಲವು ವಿದ್ಯಾರ್ಥಿಗಳಲ್ಲಿ ಹೇಳಿ ಕಳುಹಿಸಿದರು.

ಕ್ಲಾಸಿಗೆ ಬಂದಾಗ, "ನೀನು ಬಿಡು, ಆ ದೇವರು ಬಯಸಿದರೂ ನಿನ್ನಿಂದ ಒಂದು ಕವನ ಬರೆಯಲು ಸಾಧ್ಯವಿಲ್ಲ" ಎಂದು ವ್ಯಂಗ್ಯವಾಗಿ ಅಣಕಿಸಿದರು.

ಈ ಮಾತಿನಿಂದ ಎಲ್ಲರ ಮುಂದೆ ಈತನಿಗೆ ಅವಮಾನವಾದಂತಾಯಿತು. ಶಾಲೆ ಮುಗಿಯುವುದರೊಳಗೆ ಒಂದಾದರೂ ಕವನ ಬರೆದು ಅವರಿಗೆ ತೋರಿಸಬೇಕು ಎಂದು

ಅಂದು ಕೊಂಡಿದ್ದನು. ಆದರೆ ಕನಸು ಕನಸಾಗಿಯೇ ಉಳಿಯಿತು. ಇಂದು ಆ ಹುಡುಗ ಕೇವಲ ಹುಡುಗನಾಗಿ ಉಳಿದಿಲ್ಲ. ಬಹಳ ದೊಡ್ಡವನಾಗಿದ್ದಾನೆ. ಯಾವ ಕವಿಗಳಿಗೂ ಸಡ್ಡು ಹೊಡೆಯಬಲ್ಲ ಕವಿಯಾಗಿದ್ದಾನೆ. ಅವನ 'ಕನಸಿನ ಭಾರತ' ಕವನ ಸಂಕಲನಕ್ಕೆ ಪ್ರಶಸ್ತಿ ಬಂದಿದೆ...

"ಏನ್ರೀ ಹತ್ತು ಪುಟ ಇದ್ದಂತೆ, ಆವಾಗಿನಿಂದ ಪತ್ರವನ್ನೇ ಓದುತ್ತಿದ್ದೀರಲ್ಲಾ" ಎಂದು ಶುಜ್ಞನ ತಾಯಿ ಹೇಳಿದಾಗ ಆಲೋಚನೆಯಿಂದ ಹೊರ ಬಂದರು.

ಸಾಹಿತ್ಯ ಸಂಘದ ವತಿಯಿಂದ ದೊಡ್ಡ ಸಮಾರಂಭವನ್ನು ಏರ್ಪಡಿಸಿದ್ದರು. ಶುಜ್ಞನ ತಂದೆ ಕುಟುಂಬ ಸಮೇತ ಸಮಾರಂಭಕ್ಕೆ ಆಗಮಿಸಿದ್ದರು. ಭವ್ಯ ಸ್ವಾಗತವೂ ಲಭಿಸಿತು. ವೇದಿಕೆಯ ಮೇಲೆ ವಯಸ್ಸಾದ ಮಹಿಳೆಯೊಬ್ಬರು ಅಧ್ಯಕ್ಷತೆಯನ್ನು ವಹಿಸಿದ್ದರು. ತಂದೆಯವರಿಗೆ ಒಂದೇ ನೋಟದಲ್ಲಿ ಅದು ನಳಿನಿ ಮಿಸ್ ಎಂಬ ಗುರುತು ಸಿಕ್ಕಿತು. ಗಡ್ಡ, ಮೀಸೆ, ದಪ್ಪ ದೇಹದ ಕಾರಣ ಶುಜ್ಞನ ತಂದೆಯವರ ಗುರುತು ಹಿಡಿಯಲು ನಳಿನಿ ಮಿಸ್‌ಗೆ ಸಾಧ್ಯವಾಗಲಿಲ್ಲ. ಇನ್ನೂ ಹಲವಾರು ಮಂದಿ ವೇದಿಕೆಯಲ್ಲಿ ಕುಳಿತಿದ್ದರು.

ನಳಿನಿ ಮಿಸ್ ಪ್ರಶಸ್ತಿಯನ್ನು ಕೊಟ್ಟು, "ನಾನು ಓದಿದ ಕವನ ಸಂಕಲನಗಳಲ್ಲಿ ಇದು ಶ್ರೇಷ್ಠ ಕವನ ಸಂಕಲನ. ಖಂಡಿತವಾಗಿಯೂ ಸಾಮಾಜಿಕ ಜಾಗೃತಿ ಮೂಡಿಸುವ ಇಂತಹ ಕವನ ಸಂಕಲನಗಳಿಂದಲೇ ಮನುಷ್ಯರ ಮನಸ್ಸನ್ನು ಗೆಲ್ಲಲು ಸಾಧ್ಯ. 'ಕನಸಿನ ಭಾರತ' ಎಂಬ ಕವನ ಸಂಕಲನದಿಂದ ನವ ಭಾರತದ ನಿರ್ಮಾಣಕ್ಕಾಗಿ ಸಮಾಜದ ಎಲ್ಲ ಮುಖಗಳನ್ನೂ ಬಡಿದೆಬ್ಬಿಸಿದ್ದಾರೆ" ಎಂದು ಮುಕ್ತ ಕಂಠದಿಂದ ಶ್ಲಾಘಿಸಿದರು. ನಂತರ ತಂದೆಯವರ ಸರದಿ ಬಂದಾಗ, "ನಾನು ನನ್ನ ಶಾಲೆಯ ಅತೀ ಅಯೋಗ್ಯ ವಿದ್ಯಾರ್ಥಿ. ಕ್ಲಾಸಿನಲ್ಲಿ ಎಷ್ಟು ಬಾರಿ ಪ್ರೋತ್ಸಾಹ ಸಿಕ್ಕರೂ ಒಂದೇ ಒಂದು ಕವನ ಬರೆಯಲು ಅಂದು ನನಗೆ ಸಾಧ್ಯವಾಗಿರಲಿಲ್ಲ. ಆಗ ಕ್ಲಾಸಿನ ಅಧ್ಯಾಪಕಿಯೊಬ್ಬರು, 'ಆ ದೇವರು ಬಯಸಿದರೂ ನಿನ್ನಿಂದ ಒಂದು ಕವನ ಬರೆಯಲು ಸಾಧ್ಯವಿಲ್ಲ' ಎಂದು ಅಣಕಿಸಿದ್ದರು. ಆದರೆ ಯಾರು ಪ್ರಯತ್ನ ಪಡುತ್ತಾರೋ ಖಂಡಿತ ದೇವನು ಅವರಿಗೆ ಸಹಾಯ ಮಾಡುತ್ತಾನೆ. ಅವರ ಸುಪ್ತ ಪ್ರತಿಭೆಯನ್ನು ಸಮಾಜದ ಮುಂದೆ ತರುತ್ತಾನೆ. ಅವರಿಂದ ಸಮಾಜಕ್ಕೆ ಒಳಿತನ್ನುಂಟು ಮಾಡುತ್ತಾನೆ. ಯಾವ ಅಧ್ಯಾಪಕಿ ಅಂದು ನನಗೆ ಈ ಮಾತನ್ನು ಹೇಳಿದ್ದರೋ, ಇಂದು ಅವರ ಕೈಯಿಂದಲೇ ನನಗೆ ಪ್ರಶಸ್ತಿ ಲಭಿಸುವಂತೆ ಮಾಡಿದ್ದಾನೆ. ಖಂಡಿತ ಆ ದೇವನಿಗೆ ಕೃತಜ್ಞತೆ" ಎಂದು ಹೇಳುತ್ತಿರುವಾಗಲೇ ನಳಿನಿ ಮಿಸ್‌ನ ಕಣ್ಣಿನಿಂದ ಆನಂದ ಬಾಷ್ಪ ಸುರಿಯುತ್ತಿದ್ದುದನ್ನು ಕಂಡ ಶುಜ್ಞನ ಕಣ್ಣು ಹನಿಗೂಡಿತು.

❖

# 3 ರಕ್ತದಾನ

"ರೈಮಾನಜ್ಜ ಬಂದರು, ರೈಮಾನಜ್ಜ ಬಂದರು..." ಎನ್ನುತ್ತಾ ಮಕ್ಕಳೆಲ್ಲರೂ ಓಡೋಡಿ ಬಂದು ಅವರ ಸುತ್ತ ನೆರೆದರು. ರೈಮಾನಜ್ಜ ಬಂದರೆ ಇಡೀ ಊರಿಗೆ ಸಂತೋಷ. ಅವರ ನಗು, ಹಾಸ್ಯಭರಿತ ಮಾತು, ವ್ಯಕ್ತಿತ್ವ ಯಾರನ್ನೂ ಆಕರ್ಷಿಸುವಂತಿತ್ತು. ರೈಮಾನಜ್ಜ ಅಂದರೆ ಮಕ್ಕಳಿಗೆ ಬಹಳ ಪ್ರೀತಿ. ಏಕೆಂದರೆ ಅವರು ಯಾವಾಗಲೂ ಮಕ್ಕಳಿಗೆ ನೀತಿಕತೆಗಳನ್ನು ಹೇಳುತ್ತಿದ್ದರು. ಅವರ ಕತೆಗಳು ವಾಸ್ತವ ಬದುಕಿನ ಚಿತ್ರಣವನ್ನು ನೀಡುತ್ತಿದ್ದುವು. ಶುಜ್ಜ, ಮುಖ್ತಾರ್, ಅಮನ್, ಅಪ್ಪು ಹಾಗೂ ಇತರ ಮಕ್ಕಳೆಲ್ಲರೂ ಬಹಳ ಕಾತರದಿಂದ ಅವರ ಸುತ್ತ ಕುಳಿತಿದ್ದರು. ಮಕ್ಕಳ ಒತ್ತಾಯಕ್ಕೆ ಮಣಿದು ರೈಮಾನಜ್ಜ ಕತೆ ಹೇಳಲಾರಂಭಿಸಿದರು:

ಒಂದು ಊರಿನಲ್ಲಿ ಒಂದು ಸುಂದರ ಮನೆಯಿತ್ತು. ಆ ಮನೆಯಲ್ಲಿ ತಂದೆ-ತಾಯಿ ಮಾತ್ರ ಇದ್ದರು. ಅವರ ಪ್ರಾರ್ಥನೆಯ ಫಲವಾಗಿ ದೇವನು ಅವರಿಗೆ ಗಂಡು ಮಗುವನ್ನು ದಯಪಾಲಿಸಿದನು. ಈ ಸಂತೋಷದಿಂದಾಗಿ ತಂದೆಯವರು ಒಂದು ಚಿಕ್ಕ ಆಡಿನ ಮರಿಯನ್ನು ಸಾಕಲು ಕೊಂಡುಕೊಂಡರು. ತಂದೆಯವರು ಮುಸಂಬಿ, ಸೇಬು, ದಾಳಿಂಬೆ ಮೊದಲಾದ ಪೌಷ್ಟಿಕ ಹಣ್ಣು ಹಂಪಲುಗಳನ್ನು ಮಗನಿಗೆ ತಿನ್ನಲು ಕೊಡುತ್ತಿದ್ದರು. ಮಗ ತಾನು ತಿಂದ ಹಣ್ಣುಗಳ ಸಿಪ್ಪೆಯನ್ನು ಆಡಿನ ಮುಂದೆ ಎಸೆಯುತ್ತಿದ್ದನು. ಆಡು ಕಿವಿಯನ್ನು ನಿಮಿರಿಸುತ್ತಾ ಬಹಳ ಪ್ರೀತಿಯಿಂದ ತಿನ್ನುತ್ತಿತ್ತು. ತಂದೆಗೆ ಆಡಿನ ಮರಿಯಲ್ಲಿ ವಿಶೇಷ ಪ್ರೀತಿ. ಅದಕ್ಕೆ ಸೊಪ್ಪು ಹಾಕುವುದು, ಗಂಜಿ ನೀರು ಕುಡಿಸುವುದು ಅವರ ದೈನಂದಿನ ಚಟುವಟಿಕೆಯಾಗಿತ್ತು. ಹೀಗೆ ಹಲವು ವರ್ಷಗಳು ಕಳೆದುವು. ಮಗ ಈಗ ದೊಡ್ಡವನಾಗಿ ಬೆಳೆದಿದ್ದನು. ಹಾಗೆಯೇ ಆಡು ಕೂಡಾ ಬಹಳ ದಷ್ಟಪುಷ್ಟವಾಗಿ ಬೆಳೆದಿತ್ತು. ಒಮ್ಮೆ ತೀವ್ರ ಜ್ವರದಿಂದ ತಂದೆ ಆಸ್ಪತ್ರೆಗೆ ಸೇರಿದರು. ವೈದ್ಯರು ಬಂದು, "ನಾಳೆಯೊಳಗೆ ರಕ್ತ ರೆಡಿಯಾಗಬೇಕು. ಇಲ್ಲಾಂದ್ರೆ ತಂದೆಯನ್ನು ಉಳಿಸುವುದು ಕಷ್ಟ" ಎಂದು ಮಗನಲ್ಲಿ ಹೇಳಿದರು.

ಮಗನಿಗೆ ರಕ್ತದಾನ ಮಾಡಲು ಹೆದರಿಕೆ. ಏಕೆಂದರೆ ಆತ ವ್ಯಾಯಾಮ ಶಾಲೆಗೆ ಹೋಗಿ ಗಟ್ಟಿ ಮುಟ್ಟಾಗಿ ಜೀವ ಬೆಳೆಸಿದ್ದನು. ಒಂದು ವೇಳೆ ತಾನು ರಕ್ತದಾನ ಮಾಡಿದರೆ ಇಷ್ಟು ದಿನ ಮಾಡಿದ ವ್ಯಾಯಾಮ ವ್ಯರ್ಥವಾಗಬಹುದು ಎಂದು



ಹಿಂಜರಿದನು. ತಂದೆ ಆಸ್ಪತ್ರೆಯಲ್ಲಿ ಜೀವನ್ಮರಣದ ಹೋರಾಟದಲ್ಲಿದ್ದರೆ, ಮಗ ರಕ್ತದ ಕುರಿತು ಆಲೋಚಿಸುತ್ತಿದ್ದನು. ಆತ ಹಲವು ಜನರನ್ನು ಸಂಪರ್ಕಿಸಿದರೂ ರಕ್ತದಾನ ಮಾಡಲು ಆತನಿಗೆ ಯಾರೂ ಸಿಗಲಿಲ್ಲ. ಬಹಳ ಚಿಂತಾಕ್ರಾಂತನಾಗಿ ಮನೆಯ ಮಂಚದ ಮೇಲೆ ಆಲೋಚಿಸುತ್ತಲೇ ಇದ್ದನು. ಆಗ ಅವನ ಬಳಿ ಬಂತು ತಂದೆಯ ಪ್ರೀತಿಯ ಆಡು. ಅವನಲ್ಲಿ ಹೇಳಿತು, "ನೋಡು... ನೀನು ನನಗಿಂತ ಶ್ರೇಷ್ಠ. ಏಕೆಂದರೆ ದೇವನು ನಿನ್ನನ್ನು ಮಾನವನಾಗಿ ಮಾಡಿದ್ದಾನೆ. ಆದರೂ ಒಂದು ಮಾತು ಹೇಳುತ್ತೇನೆ. ನಿನ್ನ ತಂದೆಯವರು ನನ್ನನ್ನು ಬಹಳ ಪ್ರೀತಿಯಿಂದ ಸಾಕಿದ್ದಾರೆ. ನನಗೆ ಸೊಪ್ಪು, ಗಂಜಿನೀರು, ಎಲ್ಲ ಬಗೆಯ ಆಹಾರವನ್ನು ಕೊಟ್ಟಿದ್ದಾರೆ. ಇದರಿಂದಾಗಿ ನಾನು ಕೂಡಾ ಅವರಿಗೆ ಹಾಲನ್ನು ಕೊಟ್ಟಿದ್ದೇನೆ. ನೋಡು ಸರಿಯಾಗಿ ಕೇಳು. ಮಾನವರು ನನ್ನ ಮಾಂಸವನ್ನು ಪದಾರ್ಥ ಮಾಡುತ್ತಾರೆ. ನನ್ನ ಕಾಲನ್ನು ಸೂಪು ಮಾಡಿ ಕುಡಿಯುತ್ತಾರೆ. ನನ್ನ ಮಿದುಳನ್ನು ಗಸಿ ಮಾಡುತ್ತಾರೆ, ನನ್ನ ಚರ್ಮದಿಂದ ಡೋಲನ್ನು ತಯಾರಿಸುತ್ತಾರೆ. ನನ್ನ ಶರೀರದಲ್ಲಿ ನಾಲಾಯಕ್ ವಸ್ತು ನನ್ನ ರಕ್ತ. ತಂದೆಗೆ ಬೇಕು ನಿನ್ನ ರಕ್ತ. ಬಹುಶಃ ನನ್ನ ದೇಹದಲ್ಲಿ ಆ ರಕ್ತವಿದ್ದಿದ್ದರೆ ಖಂಡಿತಾ ನಾನು ತಂದೆಗೆ ಕೊಡುತ್ತಿದ್ದೆ. ಛೆ! ಛೆ!... ನಾನು ಆಡಾಗಿ ಹೋದೆನಲ್ಲಾ" ಎಂದು ರೋದಿಸುತ್ತಿದ್ದಂತೆಯೇ ಮಗನಿಗೆ ಎಚ್ಚರವಾಯಿತು.

ತಾನು ಯೋಚನಾ ಲಹರಿಯಲ್ಲಿದ್ದಾಗ ಕನಸಿನಲ್ಲಿ ಬಂದು ಹೇಳಿದ ಆಡಿನ ಮಾತುಗಳು ಆತನ ಮನಸ್ಸಲ್ಲಿ ಬಹಳ ಪ್ರಭಾವವನ್ನುಂಟು ಮಾಡಿತು. ಹೊರಗೆ ಹೋಗಿ ಅಂಗಳದಲ್ಲಿದ್ದ ಆಡನ್ನು ನೋಡಿದಾಗ ಅದರ ಬಳಿಯಲ್ಲಿದ್ದ ಸೊಪ್ಪು ಮತ್ತು ಗಂಜಿ ನೀರು ಹಾಗೆಯೇ ಇತ್ತು. ಹೌದು, ದಿನಾ ಕುಡಿಸುವವರು ಜೀವನ್ಮರಣದ ಸ್ಥಿತಿಯಲ್ಲಿದ್ದರೆ ತಾನು ಹೇಗೆ ಹೊಟ್ಟೆ ತುಂಬ ತಿನ್ನಲಿ ಎಂದು ಯೋಚಿಸುತ್ತಿರಬೇಕು. ಅಲ್ಲಿಂದ ಸೀದಾ ಆಸ್ಪತ್ರೆಗೆ ಹೋಗಿ ತನ್ನ ರಕ್ತವನ್ನು ತಂದೆಗೆ ಕೊಟ್ಟನು. ತಂದೆಯ ಜೀವ ಉಳಿಯಿತು. ಅವರು ಗುಣಮುಖರಾಗಿ ಮನೆಗೆ ಬಂದು ಮಂಚದಲ್ಲಿ ಆರಾಮವಾಗಿ ಮಲಗಿದರು. ಒಮ್ಮೆಲೇ ಅವರ ಕಣ್ಣು ಅಂಗಳದ ಕಂಬದ ಹತ್ತಿರ ಸರಿಯಿತು. ಅಲ್ಲಿ ಸೊಪ್ಪು, ಗಂಜಿ ನೀರಿನ ಪಾತ್ರೆ ಹಾಗೂ ಆಡನ್ನು ಕಟ್ಟಿ ಹಾಕುತ್ತಿದ್ದ ಹಗ್ಗ ಮಾತ್ರವಿತ್ತು. ಆಡು ಕಾಣಿಸುತ್ತಿರಲಿಲ್ಲ. ಅವರಿಗೆ ಕುತೂಹಲವಾಯಿತು. ಆಡು ಎಲ್ಲಿಗೆ ಹೋಗಿರಬೇಕು ಎಂದು ಇಡೀ ಮನೆಯನ್ನೊಮ್ಮೆ ಸುತ್ತಾಡಿದರು. ಆದರೆ ಅವರ ಪ್ರೀತಿಯ ಆಡು ಅಲ್ಲಿ ಕಾಣಿಸಲಿಲ್ಲ. ಅಲ್ಲಿಂದ ಹಿಂತಿರುಗಿ ಹೆಂಡತಿಯನ್ನು, "ಆಡು ಎಲ್ಲಿಗೆ ಹೋಗಿದೆ ಕಾಣಿಸುತ್ತಿಲ್ಲವಲ್ಲ..." ಎಂದು ಕೇಳಿದರು. ಮನೆಯವರಿಂದ ಏನೂ ಉತ್ತರ ಬರಲಿಲ್ಲ. ಮುಂದುವರಿಸಿ, "ನಮ್ಮ ಆಡು ಎಲ್ಲಿದೆ? ಪಾಪ ಎಷ್ಟು ದಿನವಾಯಿತೋ ಸರಿಯಾಗಿ ತಿನ್ನದೆ, ಕುಡಿಯದೆ. ಅದಕ್ಕೆ ಸೊಪ್ಪು ತಿನ್ನಿಸಬೇಕು, ಗಂಜಿ ನೀರು ಕುಡಿಸಬೇಕು" ಎಂದು ಮಾತು ಮುಗಿಸುವಷ್ಟರಲ್ಲಿ, "ಆಸ್ಪತ್ರೆಯ ಬಿಲ್ಲಿಗೆ ಕಾಸಿರಲಿಲ್ಲ. ಅದಕ್ಕಾಗಿ ಆಡನ್ನು ಕಸಾಯಿಖಾನೆಗೆ ಮಾರಿದ್ದೇವೆ" ಎಂದು ಹೆಂಡತಿ ಹೇಳಿದರು.

ಅವರಿಗೆ ಏನಾದರೂ ಹೇಳಬೇಕೆಂದೆನಿಸಿತು. ಆದರೆ ಬಾಯಿಯಿಂದ ಮಾತೇ ಬರಲಿಲ್ಲ. ಸೀದಾ ಬಂದು ಮಂಚದಲ್ಲಿ ಮಲಗಿದರು. ಅವರ ಕಣ್ಣುಗಳಲ್ಲಿ ಆಡಿನ ಚಿತ್ರವೇ ತೇಲಿ ಬರುತ್ತಿತ್ತು.

ಎಂದು ಹೇಳಿ ರೈಮಾನಜ್ಜ ತನ್ನ ಕನ್ನಡಕವನ್ನು ತೆಗೆದು ಕಣ್ಣೀರು ಒರೆಸಿದರು. ಆಗ ಅಮನ್, "ಅವರು ಹಾಗೆ ಮಾಡಬಾರದಿತ್ತು" ಎಂದು ಹೇಳಿದಾಗ, ಅದಕ್ಕೆ ಅಪ್ಪು ಹೌದೌದು! ಅವರು ಹಾಗೆ ಮಾಡಬಾರದಿತ್ತು ರೈಮಾನಜ್ಜ" ಎಂದು ದುಃಖದ ಗಂಟಲಿನಲ್ಲಿ ದನಿಗೂಡಿಸಿ ಹೇಳಿದನು. ರೈಮಾನಜ್ಜ ಒಮ್ಮೆಲೆ ಎದ್ದು ಊರುಗೋಲಿನ ಹೆಜ್ಜೆಯೊಂದಿಗೆ ಮನೆಯೆಡೆಗೆ ನಡೆಯ ತೊಡಗಿದರು. ಯಾವಾಗಲೂ ಹೋಗುವಾಗ ನಕ್ಕು ನಡೆಯುತ್ತಿದ್ದ ರೈಮಾನಜ್ಜ ಇಂದು ಈ ರೀತಿ ಏನೂ ಮಾತನಾಡದೇ ನಡೆಯುವುದನ್ನು ನೋಡಿ ಮಕ್ಕಳೆಲ್ಲರೂ ಅವಾಕ್ಕಾದರು. ಪಾಪ! ಮಕ್ಕಳಿಗೇನು ಗೊತ್ತು ಆ ತಂದೆ ರೈಮಾನಜ್ಜನೇ ಎಂದು...

❖

# 4 ಶುಜ್ಜ ಮತ್ತು ಅಕ್ವೇರಿಯಮ್

**ಶುಜ್ಜ**ನ ಮನೆಗೆ ಅಕ್ವೇರಿಯಮ್ ತಂದಿದ್ದರು. ಅದರಲ್ಲಿ ಬಣ್ಣ ಬಣ್ಣದ ಹಲವಾರು ಮೀನುಗಳಿದ್ದುವು. ಕೆಂಪು ಮೀನು, ನೀಲಿ ಮೀನು, ಹಳದಿ ಮೀನು, ಬಿಳಿ ಮೀನು ಹೀಗೆ ನೋಡಲು ತುಂಬಾ ಆಕರ್ಷಕವಾಗಿದ್ದುವು. ನೋಡುಗರ ಕಣ್ಮನ ತಣಿಸುವಂತಹ ಸೌಂದರ್ಯವನ್ನು ಹೊಂದಿತ್ತು. ಅಲ್ಲದೆ ಬಣ್ಣ ಬಣ್ಣದ ಕಲ್ಲುಗಳು, ಚಿಪ್ಪು ಇತ್ಯಾದಿಗಳೂ ಅದರೊಳಗೆ ಇದ್ದುವು. ಶುಜ್ಜನಿಗೆ ಈಗ ಅಕ್ವೇರಿಯಮ್‌ನೊಂದಿಗೆ ದಿನ ಕಳೆಯುವುದು ಸಾಮಾನ್ಯ ರೂಢಿಯಾಗಿತ್ತು. ಪಕ್ಕದ ಮನೆಯ ಸ್ನೇಹಿತರಾದ ನದೀಮ್, ಶಫಿ, ನಸೀಹಾ ಎಲ್ಲರೂ ಶುಜ್ಜನ ಅಕ್ವೇರಿಯಮ್ ನೋಡಲು ಮನೆಗೆ ಬರುತ್ತಿದ್ದರು. ಎಲ್ಲರೂ ಒಟ್ಟಿಗೆ ಸೇರಿ ಮನೆಯಲ್ಲಿ ಮನರಂಜನೆಯನ್ನು ಪಡೆಯುತ್ತಿದ್ದರು. ಎಷ್ಟೇ ಕೆಲಸವಿದ್ದರೂ ಸರಿ, ಶುಜ್ಜ ಶಾಲೆಗೆ ಹೋಗುವ ಸಮಯ ಬಂದರೆ ಎಲ್ಲವನ್ನೂ ಬಿಟ್ಟು ಶಾಲೆಗೆ ಹೋಗುತ್ತಿದ್ದನು.

ಒಮ್ಮೆ ಶಾಲೆಯಲ್ಲಿ ಅಧ್ಯಾಪಕರು ಡಾ| ಅಂಬೇಡ್ಕರ್‌ರ ಜೀವನ ಕಥೆಯನ್ನು ಹೇಳುತ್ತಿದ್ದರು. ಅಂಬೇಡ್ಕರ್ ಕೆಳಜಾತಿಗೆ ಸೇರಿದ ಕಾರಣಕ್ಕಾಗಿ ಅವರು ಪಟ್ಟಂತಹ ನೋವು, ಹಿಂಸೆ, ಸಂಕಷ್ಟ ಮೊದಲಾದ ಅಂಶಗಳು ಇದರಲ್ಲಿ ಸೇರಿದ್ದವು. ಒಮ್ಮೆ ಅಂಬೇಡ್ಕರ್ ಬಾಲಕನಾಗಿದ್ದಾಗಿನ ಘಟನೆ. ಅತಿಯಾದ ಬಾಯಾರಿಕೆಯಿಂದ ಬಳಲುತ್ತಿದ್ದಾಗ ಅವರಿಗೆ ಒಂದು ಕೆರೆ ಕಂಡಿತ್ತು. ಆ ಕೆರೆಯಲ್ಲಿ ಹಂದಿಯೊಂದು ಸತ್ತು ಬಿದ್ದಿತು. ಅಂಬೇಡ್ಕರ್ ಆ ಕೆರೆಗೆ ನೀರು ಕುಡಿಯಲು ಹೋದಾಗ ಅಲ್ಲಿನ ಜನ ಅವರನ್ನು ಮರವೊಂದಕ್ಕೆ ಕಟ್ಟಿ ಹಾಕಿ ಪ್ರಜ್ಞೆ ತಪ್ಪುವ ವರೆಗೆ ಹೊಡೆದರು. ಈ ಘಟನೆಯು ಶುಜ್ಜನ ಮನದಲ್ಲಿ ಅಚ್ಚಳಿಯದೆ ಉಳಿದಿತ್ತು. "ಮಾನವರು ಯಾಕೆ ಹೀಗೆ? ಯಾಕೆ ಈ ಮಾನವರಲ್ಲಿ ಇಂತಹ ಭೇದಭಾವ?" ಎಂಬ ವಿಚಾರ ಆ ಪುಟ್ಟ ಹೃದಯದಲ್ಲಿ ಮೂಡುತ್ತಿತ್ತು.

ತಂದೆಯವರಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿದಾಗ "ನೋಡು ಶುಜ್ಜ, ಸಾವಿರದ ನಾಲ್ನೂರು ವರ್ಷಗಳ ಹಿಂದೆ ಇಂತಹದೇ ಪರಿಸ್ಥಿತಿ ಅರೇಬಿಯಾದಲ್ಲಿತ್ತು. ಅಲ್ಲಿ ಬಿಲಾಲ್ ಎಂಬ ಗುಲಾಮರಿದ್ದರು. ಅವರಿಗೆ ಆರಾಧನಾಲಯಗಳಿಗೆ ಹೋಗಲು ಅನುಮತಿಯಿರಲಿಲ್ಲ. ಯಾರು ಬೇಕಾದರೂ ಹೇಗೆ ಬೇಕಾದರೂ ಅವರನ್ನು



ಹೊಡೆಯುತ್ತಿದ್ದರು, ಹಿಂಸಿಸುತ್ತಿದ್ದರು. ಯಾರೂ ಅಲ್ಲಿ ಕೇಳುವವರಿಲ್ಲ. ಅಷ್ಟೊಂದು ಹೀನಾಯ ಸ್ಥಿತಿ ಅಲ್ಲಿನ ಕರಿಯ ಗುಲಾಮರಿಗಿತ್ತು. ಬಿಲಾಲ್‌ರಿಗೆ ಚಾಟಿಯಲ್ಲಿ ಹೊಡೆಯುತ್ತಿದ್ದರು. ಉರಿಯುವ ಮರಳ ಮೇಲೆ ಮಲಗಿಸುತ್ತಿದ್ದರು. ಈ ಎಲ್ಲಾ ಶಿಕ್ಷೆಯು ಆ ಪ್ರದೇಶದಲ್ಲಿ ಕೆಳ ವರ್ಗದ ಗುಲಾಮರಿಗೆ ರೂಢಿಯಾಗಿತ್ತು. ಆದರೆ ಇಸ್ಲಾಮ್ ಇವೆಲ್ಲವನ್ನೂ ಹೋಗಲಾಡಿಸಿತು. ಈ ಎಲ್ಲಾ ಭೇದಭಾವವನ್ನು ಅಳಿಸಿ ಹಾಕಿತು. ಉಚ್ಚ-ನೀಚತೆ ಎಂಬ ಕಲ್ಪನೆಗೆ ಆಸ್ಪದವೇ ಇಲ್ಲದಂತೆ ಮಾಡಿತು. ಪ್ರವಾದಿ(ಸ) ಮಕ್ಕಾ ವಿಜಯವಾದಾಗ ವಿಜಯ ಘೋಷಣೆಗಾಗಿ ಅದಾನ್ (ನಮಾಝ್‌ನ ಕರೆ) ಕೊಡಲು ಬಯಸಿದ್ದರು. ಎಲ್ಲರೂ ಈ ಭಾಗ್ಯ ತಮಗೆ ಸಿಗಬೇಕು ಎಂದು ತುದಿಗಾಲಲ್ಲಿ ನಿಂತಿದ್ದರು. ಏಕೆಂದರೆ ಅದು ಬಹಳ ಪ್ರತಿಷ್ಠೆಯ ಕೆಲಸವಾಗಿತ್ತು. ಪ್ರವಾದಿ(ಸ) ಬಿಲಾಲ್‌ರಿಗೆ 'ಅದಾನ್ ಕೊಡಿರಿ' ಎಂದು ಹೇಳಿದರು. ಕರಿಯ, ಕೆಳವರ್ಗದವ, ಗುಲಾಮ ಎಂಬ ಕಾರಣಕ್ಕಾಗಿ ಹಿಂಸಿಸಲ್ಪಡುತ್ತಿದ್ದ ಅದೇ ಬಿಲಾಲ್ ಇಂದು ಎಲ್ಲರಿಗಿಂತ ಪ್ರತಿಷ್ಠಿತ ಸ್ಥಾನದಲ್ಲಿ ನಿಂತಿದ್ದಾರೆ. ಕಅಬಾ ಭವನದೊಳಗೆ ಹೋಗಲು ಪ್ರವೇಶವಿಲ್ಲದಂತಹ ಅದೇ ಬಿಲಾಲ್ ಇಂದು ಅದಾನ್ ಕರೆಯನ್ನು ಮೊಳಗಿಸಲು ಎಲ್ಲರಿಗಿಂತ ಮೇಲೆ ನಿಂತಿದ್ದಾರೆ. ಬಿಲಾಲ್ ಆ ಕಅಬಾಲಯದ ಶಿಲೆಯ

ಮೇಲೆ ಹತ್ತಲು ಪ್ರಯತ್ನಿಸಿದರು. ಏಕೆಂದರೆ ಅದು ಅವರಿಗಿಂತ ಎತ್ತರವಿತ್ತು. ಆಗ ಪ್ರವಾದಿ(ಸ), "ಬಿಲಾಲ್! ನನ್ನ ಹೆಗಲ ಮೇಲೆ ಕಾಲಿಟ್ಟು ಹತ್ತಿರಿ" ಎಂದು ಬಿಲಾಲ್‌ರನ್ನು ಹತ್ತಿಸಿದರು. ಹೀಗೆ ಎಲ್ಲಾ ಮೇಲು-ಕೀಳು, ಉಚ್ಚ-ನೀಚತೆಯ ಸಂಕೋಲೆಯನ್ನು ಇಸ್ಲಾಮ್ ಒಡೆದು ಹಾಕಿತ್ತು. ನೋಡು ಶುಜ್ಞಾ, ಇದರ ಪರಿಣಾಮವಾಗಿಯೇ ಎಲ್ಲರೂ ನಮಾಝಿನಲ್ಲಿ ಭುಜಕ್ಕೆ ಭುಜಕೊಟ್ಟು ಸಾಲಾಗಿ ನಿಲ್ಲುತ್ತಾರೆ. ಅಲ್ಲಿ ಕರಿಯ-ಬಿಳಿಯ, ರಾಜ-ಗುಲಾಮ, ಶ್ರೀಮಂತ-ಬಡವ ಎಂಬ ಭೇದವಿಲ್ಲದೆ ಎಲ್ಲರೂ ಒಂದೇ ಪಂಕ್ತಿಯಲ್ಲಿ ಸಾಲಾಗಿ ನಿಲ್ಲುತ್ತಾರೆ. ಅಲ್ಲಿ ಯಾರಿಗೂ ಪ್ರತಿಷ್ಠೆಯ ಯೋಚನೆಯೇ ಬರುವುದಿಲ್ಲ. ಎಲ್ಲರೂ ದೇವನ ಮುಂದೆ ಸಮಾನರು, ಗೌರವಾರ್ಹರು" ಎಂದು ಮನ ಮುಟ್ಟುವಂತೆ ಹೇಳಿದರು.

ಆದರೆ ಶುಜ್ಞನ ಚಿಕ್ಕ ಮೆದುಳಿಗೆ ಈ ವಿಚಾರವು ಸರಿಯಾಗಿ ಅರ್ಥವಾಗಲಿಲ್ಲ. ಪೆದ್ದು ಪೆದ್ದಾಗಿ ಆತ ತಂದೆಯನ್ನೇ ನೋಡುತ್ತಿದ್ದನು. ಆತನ ಮುಖಭಾವದಿಂದ ಆತನ ಸಂಶಯ ನಿವಾರಣೆಯಾಗಲಿಲ್ಲ ಎಂಬ ಅಂಶ ಗೋಚರಿಸುತ್ತಿತ್ತು. ಆಗ ತಂದೆ, "ಶುಜ್ಞ ನಾಳೆ ನಿನ್ನ ಅಕ್ವೇರಿಯಮ್‌ಗೆ ಒಂದು ಕಪ್ಪು ಮೀನನ್ನು ತಂದು ಹಾಕಬೇಕು" ಎಂದರು.

ತಂದೆಯ ಸಲಹೆಯಂತೆ ಶುಜ್ಞ ಕಪ್ಪು ಮೀನನ್ನು ತಂದು ಅಕ್ವೇರಿಯಮ್‌ಗೆ ಹಾಕಿದನು. ಆಗ ಅಲ್ಲಿದ್ದ ಕೆಂಪು, ನೀಲಿ, ಹಳದಿ, ಬಿಳಿ ಇತರ ಬಣ್ಣ ಬಣ್ಣದ ಮೀನುಗಳು ಕಪ್ಪು ಮೀನನ್ನು ಆದರ ಪೂರ್ವಕವಾಗಿ ಸ್ವಾಗತಿಸಿದುವು. ಎಲ್ಲವೂ ಅದರ ಹತ್ತಿರ ಬಂದು ಕುಶಲ ವಿಚಾರ, ಪರಿಚಯ ಮಾಡಿಕೊಳ್ಳುತ್ತಿತ್ತು. ಬಣ್ಣದ ಮೀನು ಎಲ್ಲೆಲ್ಲಾ ಸುತ್ತುತ್ತಿತ್ತೋ ಕಪ್ಪು ಮೀನಿಗೂ ಅಲ್ಲೆಲ್ಲಾ ಸುತ್ತಾಡಲು ಅವಕಾಶವಿತ್ತು. ಯಾವ ಆಹಾರ ಬಣ್ಣದ ಮೀನು ತಿನ್ನುತ್ತಿತ್ತೋ ಅದೇ ಆಹಾರವನ್ನು ಕಪ್ಪು ಮೀನೂ ತಿನ್ನುತ್ತಿತ್ತು. ಅಲ್ಲಿ ಎಲ್ಲವೂ ಸಮಾನತೆಯಲ್ಲಿ ಜೀವಿಸುತ್ತಿದ್ದುವು. ಭೇದಭಾವವೆಂಬುದೇ ಆ ಚಿಕ್ಕ ಅಕ್ವೇರಿಯಮ್ ಲೋಕದಲ್ಲಿರಲಿಲ್ಲ. ಈ ಅಂಶವನ್ನು ತಂದೆ ಶುಜ್ಞನಿಗೆ ತೋರಿಸಿ ಕೊಟ್ಟಾಗ, ಪ್ರಕೃತಿಯಲ್ಲಿ ಯಾವುದೇ ತಾರತಮ್ಯವಿಲ್ಲ. ಮನುಷ್ಯ ತಾನೇ ಈ ಭೇದಭಾವವನ್ನು ಸೃಷ್ಟಿಸಿದ್ದಾನೆ. ಇಸ್ಲಾಮ್ ಪ್ರಕೃತಿಯ ಧರ್ಮ. ಸಮಾನತೆಯನ್ನು ಬೋಧಿಸುವ ಧರ್ಮ ಎಂದು ಶುಜ್ಞನಿಗೆ ಮನದಟ್ಟಾಯಿತು. ಆಗ ಅವನ ಮುಖದಲ್ಲಿ ಬಿಲಾಲ್‌ರ ಘಟನೆಯು ಅರ್ಥವಾದಂತೆ ಅನ್ನಿಸುತ್ತಿತ್ತು.

❖

# ⑤ ಮುದುಕ ಮತ್ತು ನಾಯಿ

ಆ ನಾಯಿ ಆ ಮುದುಕನನ್ನೇ ಹಿಂಬಾಲಿಸುತ್ತಿತ್ತು. ಎಲ್ಲಿ ಹೋದರೂ ಅವರ ಹಿಂದೆಯೇ ನಡೆಯುತ್ತಿತ್ತು. ಸಣಕಲು ದೇಹ, ಗುಳಿಬಿದ್ದ ಕಣ್ಣು, ಬಿಳಿ ಗಡ್ಡ. ಹರಕು ಬಟ್ಟೆ, ಕೈಯಲ್ಲೊಂದು ಪ್ಲಾಸ್ಟಿಕ್ ಚೀಲವನ್ನು ಹಿಡಿದು ಮಾರ್ಗದ ಬದಿಯಲ್ಲಿ ನಡೆಯುತ್ತಿದ್ದುದನ್ನು ಕಂಡರೆ ಭಿಕ್ಷುಕನಂತೆಯೇ ಕಾಣುತ್ತಿದ್ದರು. ಆದರೂ ಅವರು ಯಾರೊಂದಿಗೂ ಕೈ ಚಾಚಿದವರಲ್ಲ. ನಡೆದೂ ನಡೆದೂ ಬಹಳ ಸುಸ್ತಾದಾಗ ಬಸ್‌ಸ್ಟಾಂಡಿನ ಹಿಂದೆ ಇದ್ದ ಮರದ ನೆರಳಿನಲ್ಲಿ ತನ್ನ ಚೀಲವನ್ನಿಟ್ಟು ನಿಟ್ಟುಸಿರು ಬಿಡುತ್ತಾ ಆರಾಮವಾದರು. ಆ ನಾಯಿಯೂ ಪಕ್ಕದ ನೆರಳಿನಲ್ಲಿ ನಾಲಗೆಯನ್ನು ಹೊರ ಚಾಚಿ ಕಾವಲುಗಾರನಂತೆ ಸ್ವಲ್ಪ ದೂರದಲ್ಲಿ ಕೂತು ಕೊಂಡಿತು. ಅವರ



ಮುಖಭಾವದಿಂದಲೇ ಅವರ ಹಸಿವೆಯನ್ನು ತಿಳಿಯಬಹುದಾಗಿತ್ತು. ಬಹುಶಃ ಹೊಟ್ಟೆಗಿಲ್ಲದೆ ಎರಡು ದಿನ ಕಳೆದಿರಬಹುದೇನೋ. ಇದೇ ಮಾರ್ಗದಲ್ಲಿ ಶಾಲೆಗೆ ಹೋಗುತ್ತಿದ್ದ ಮುಖ್ತಾರ್‌ನಿಗೆ ಈ ಮುದುಕನನ್ನು ಕಂಡು ಕನಿಕರವಾಯಿತು. ಆತ ನೇರವಾಗಿ ಸ್ನೇಹಿತ ಶುಜ್ಜನಲ್ಲಿ ಬಂದು ಈ ವಿಷಯ ತಿಳಿಸಿದನು. ಮುಖ್ತಾರ್‌ನಿಗೆ ಇಂಥವರನ್ನು ಕಂಡರೆ ಎಲ್ಲಿಲ್ಲದ ಕರುಣೆ. ಶುಜ್ಜನ ಮನಸ್ಥಿತಿಯೂ ಇದೇ ತೆರನಾಗಿದ್ದ ಕಾರಣ ಇಬ್ಬರೂ ಸೇರಿ ತರಗತಿಯ ಮಕ್ಕಳಲ್ಲಿ ಒಂದೊಂದು ರೂಪಾಯಿಯಂತೆ ಸಂಗ್ರಹಿಸಿ ಆ ಮುದುಕನಿಗೆ ತಿನ್ನಲು ಬೇಕಾದ ಆಹಾರವನ್ನು ತಂದು ಕೊಟ್ಟರು. ಮುದುಕ ಇವರು ತಂದ ಆಹಾರ ಪೊಟ್ಟಣವನ್ನು ತೆರೆದು ಅದರಲ್ಲಿದ್ದ ರೊಟ್ಟಿ ತುಂಡನ್ನು ತನ್ನ ನಾಯಿಗೆ ಹಾಕಿದರು. ಅದು ತನ್ನ ಕಿವಿ ನಿಮಿರಿಸುತ್ತಾ ಅದನ್ನು ತಿನ್ನಲು ಪ್ರಾರಂಭಿಸಿತು. ಪಾಪ ನಾಯಿ ತನ್ನ ಮಾಲಿಕನ ಕೈಯಿಂದಲೇ ತಿನ್ನುವ ಅಭ್ಯಾಸವನ್ನು ರೂಢಿಸಿಕೊಂಡಿರಬೇಕು. ತನ್ನ ಕೈಯಲ್ಲಿದ್ದ ಉಳಿದ ತಿಂಡಿಯನ್ನು ತಿನ್ನುತ್ತಿದ್ದಂತೆ ಮುದುಕನ ಕಣ್ಣಿನಿಂದ ಹನಿಯೊಂದು ಕೆಳಕ್ಕೆ ಬಿತ್ತು. ಶುಜ್ಜ, "ಅಳಬೇಡಿ ಅಬ್ಬಾ, ತಿನ್ನಿರಿ" ಎಂದು ಸಮಾಧಾನಿಸಿದನು. ಮುದುಕನ ತುಟಿ ಅದುರುತ್ತಿತ್ತು. ತಡವರಿಸುತ್ತಾ ಹೇಳಿದರು,

"ನಿಮ್ಮಂಥ ಮಕ್ಕಳನ್ನು ಪಡೆದ ತಂದೆ ತಾಯಂದಿರು ನಿಜಕ್ಕೂ ಭಾಗ್ಯವಂತರು. ನನ್ನನ್ನು ನೋಡಿ, ನನಗೆ ಆ ನಾಯಿಯನ್ನು ಬಿಟ್ಟರೆ ಬೇರಾರೂ ಇಲ್ಲ. ಎಲ್ಲಿ ಹೋದರೂ ನನ್ನ ಬೆನ್ನ ಹಿಂದೆ ಹಿಂದೆಯೇ ಬರುತ್ತದೆ. ನಾನು ತಿಂದರೆ ಮಾತ್ರ ತಿನ್ನುತ್ತದೆ. ನಾನು ಹಸಿದರೆ ಅದೂ ಹಸಿದಿರುತ್ತದೆ. ಹಿಂದೆ ಬಟ್ಟೆ ವ್ಯಾಪಾರ ಮಾಡುತ್ತಿದ್ದಾಗ ಅಂಗಡಿಯ ಸಮೀಪದಲ್ಲಿ ನಾಯಿಯೊಂದು ಮರಿಗಳನ್ನು ಹಾಕಿತ್ತು. ಅದರಲ್ಲಿ ಎಲ್ಲ ಮರಿಗಳೂ ಸತ್ತು ಈ ನಾಯಿ ಮಾತ್ರ ಉಳಿಯಿತು. ಈ ನಾಯಿ ತನ್ನ ತಾಯಿಯೊಂದಿಗೆ ಬಹಳ ಅನ್ಯೋನ್ಯವಾಗಿತ್ತು. ಒಂದು ದಿನ ಅದ್ಯಾವುದೋ ಟ್ರಕ್ ಬಂದು ಹೊಡೆದಾಗ ಅದರ ಅಡಿಗೆ ಬಿದ್ದು ತಾಯಿನಾಯಿ ಸತ್ತು ಹೋಯಿತು. ತನ್ನ ತಾಯಿಯ ಹತ್ತಿರ ನಿಂತು ಈ ಮರಿ ಅರಚುತ್ತಾ ಇತ್ತು. ಅಂದಿನ ವರೆಗೆ ಹಾಲು ಕೊಡುತ್ತಿದ್ದ ಅಮ್ಮ ಇಂದು ಅನಾಥವಾಗಿ ನನ್ನನ್ನೂ ಬಿಟ್ಟು ಹೋಯಿತಲ್ಲಾ ಎಂಬ ಕಾರಣದಿಂದಲೇ ಜೋರಾಗಿ ಕೂಗುತ್ತಿತ್ತು. ಯಾರೂ ಇದರ ನೋವನ್ನು ಲೆಕ್ಕಿಸುತ್ತಿರಲಿಲ್ಲ. ಕೊನೆಗೆ ನಾನು ನನ್ನ ಬಟ್ಟೆಯಂಗಡಿಯನ್ನು ಮುಚ್ಚುವ ಸಮಯವಾದಾಗ ಈ ಮರಿ ನನ್ನ ಕಾಲಿನ ಹತ್ತಿರ ಬಂದು ಕೂತಿತ್ತು. ಎಷ್ಟು ಓಡಿಸಿದರೂ ಇದು ನನ್ನ ಬೆನ್ನ ಹಿಂದೆಯೇ ಬರುತ್ತಿತ್ತು. ಕೊನೆಗೆ ನನ್ನ ಗೇಟ್ ಬಳಿಗೆ ಬಂದಾಗ ನನ್ನ ಹೆಂಡತಿಯ ಕನಿಕರಕ್ಕೆ ಮಣಿದು ಮನೆಯ ಅಂಗಳದಲ್ಲಿ ಸ್ಥಾನವನ್ನು ಪಡೆಯಿತು. ಅಂದಿನಿಂದ ಅದರ ಆಹಾರ ನೀರು ಎಲ್ಲವನ್ನೂ ನಾನೇ ಕೊಡುವುದು.

ನಾನು ಅಂಗಡಿಗೆ ಹೋಗುವಾಗ ಇದೂ ನನ್ನೊಂದಿಗೆ ಅಂಗಡಿಗೆ ಬರುತ್ತಿತ್ತು. ಅಂಗಡಿಯ ಹೊರಗೆ ನಿಂತು ಅಂಗಡಿಯ ಕಾವಲುಗಾರನಂತೆ ಕೆಲಸ ಮಾಡುತ್ತಿತ್ತು. ಆದರೂ ಯಾರೂ ಅದನ್ನು ಮುಟ್ಟುತ್ತಿರಲಿಲ್ಲ. ಏಕೆಂದರೆ ಮುಸ್ಲಿಮರು ನಾಯಿಯನ್ನು ಮುಟ್ಟಬಾರದು. ಆದರೂ ಅದಕ್ಕೆ ಉಪದ್ರವ, ಕಲ್ಲು ಹೊಡೆಯುವುದನ್ನು ಪ್ರವಾದಿ(ಸ) ತಡೆದಿದ್ದಾರೆ. ನನ್ನ ಇಬ್ಬರು ಮಕ್ಕಳು ಆಗ ವಿದ್ಯಾಭ್ಯಾಸ ಮುಗಿಸಿ ಒಂದು ಹಂತಕ್ಕೆ ಬಂದಿದ್ದರು. ಅವರ ಹೆಸರು ಅಕೀಲ್ ಮತ್ತು ಹಾಬಿಸಾ. ನನ್ನ ಮಕ್ಕಳ ಲೌಕಿಕ ಕಲಿಕೆಯ ಭರದಲ್ಲಿ ಅವರಿಗೆ ನೈತಿಕ, ಧಾರ್ಮಿಕ ಶಿಕ್ಷಣವನ್ನು ಕೊಡಲು ನನ್ನಿಂದ ಸಾಧ್ಯವಾಗಲಿಲ್ಲ. ತಂದೆ ತಾಯಿ, ಕುಟುಂಬಿಕರ ಹಕ್ಕುಗಳ ಕುರಿತು ಅವರಿಗೆ ಕಲಿಸಿರಲಿಲ್ಲ. ಇಂದು ಅವರು ಬಹಳ ದೊಡ್ಡ ಜನರಾಗಿದ್ದಾರೆ. ಜನರ ಹಕ್ಕುಗಳಿಗೆ ಹೋರಾಡುತ್ತಿದ್ದಾರೆ. ಆದರೆ ಅವರ ತಂದೆಯ ಸ್ಥಿತಿ ಹೇಗಿದೆ ಎಂಬುದು ನೋಡಲು ಅವರಿಗೆ ಪುರುಸೊತ್ತಿಲ್ಲ" ಎಂದು ಕೆಮ್ಮುತ್ತಾ ಕಫವನ್ನು ಹೊರಗೆ ಉಗುಳಿದರು. ಸ್ವಲ್ಪ ಕಫ ಅವರ ಗಡ್ಡಕ್ಕೂ ತಾಗಿತ್ತು.

ಆಗಲೇ ಮುಖ್ತಾರ್‌ನಿಗೆ ತನ್ನ ಅಜ್ಜನ ಸುತ್ತ ನೆರೆದ ಅಪ್ಪ, ಚಿಕ್ಕಪ್ಪ, ಚಿಕ್ಕಮ್ಮ ಕಣ್ಣ ಮುಂದೆ ಬಂದರು. ಆಸ್ಪತ್ರೆಯ ಮಂಚದಲ್ಲಿ ಅಜ್ಜ ತನ್ನ ಮರಣಾಸನ್ನ ಸ್ಥಿತಿಯಲ್ಲಿದ್ದರು. ಎಲ್ಲರೂ ಸುತ್ತ ನೆರೆದು ಕಣ್ಣೀರು ಹಾಕುತ್ತಿದ್ದರು. ಆಗ ಅಜ್ಜ ಕೆಮ್ಮಿದಾಗ ಅವರ ಕಫವು ಅವರ ಗಡ್ಡಕ್ಕೆ ತಾಗಿತು. ಎಲ್ಲರೂ ಸೇರಿ ಅದನ್ನು ಕೈಯಿಂದ, ಬಟ್ಟೆಯಿಂದ ಒರೆಸುತ್ತಿದ್ದ ಕ್ಷಣವನ್ನು ನೆನೆದ ಮುಖ್ತಾರ್‌ನಿಗೆ ಈ ಮುದುಕನ ಕಫ ಒರೆಸಲು ಯಾರೂ ಇಲ್ಲವಲ್ಲ. ಅಂದುಕೊಂಡು ತನ್ನ ಕರ್ಚೀಫನ್ನು ಕೊಟ್ಟ. ಮುದುಕ ಮುಂದುವರಿಸಿದರು,

"ನನ್ನ ಮಕ್ಕಳು ಈಗ ವಿದೇಶದಲ್ಲಿ ಉನ್ನತ ಉದ್ಯೋಗದಲ್ಲಿದ್ದಾರೆ. ಅವರ ತಾಯಿ ಕಿಡ್ನಿ ತೊಂದರೆಯಲ್ಲಿ ಬಳಲುತ್ತಿದ್ದಾಗ ಅವರಿಗೆ ಕೆಲಸ ಬಿಟ್ಟು ಬರಲು ಪುರುಸೊತ್ತಿರಲಿಲ್ಲ. ಅಲ್ಲಿಂದ ಸ್ವಲ್ಪ ಹಣ ಮಾತ್ರ ಕಳಿಸಿದ್ದರು. ನನಗೆ ಅವರ ಜುಜುಬಿ ಹಣವನ್ನು ನೋಡಿದಾಗಲೇ ಕೋಪ ನೆತ್ತಿಗೇರಿತ್ತು. ನನ್ನ ಮನೆಯನ್ನು ಮಾರಿ ಆಸ್ಪತ್ರೆಯ ಬಿಲ್ಲನ್ನು ಕೊಟ್ಟರೂ ಅವಳನ್ನು ಉಳಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಅಂದಿನಿಂದ ನಾನೊಬ್ಬನೇ ಹೀಗೆ ತಿರುಗಾಡುತ್ತಿದ್ದೇನೆ, ಮಕ್ಕಳು ವೃದ್ಧಾಶ್ರಮಕ್ಕೆ ಸೇರಿಸಿದರೆ ನನ್ನ ನಾಯಿ ಅನಾಥವಾಗಬಹುದು" ಎಂಬ ಭಯದಿಂದಲೇ ಎಲ್ಲವನ್ನೂ ಬಿಟ್ಟು ಈ ಸ್ಥಿತಿಗೆ ಬಂದಿದ್ದೇನೆ. ಕೇವಲ ಒಂದು ಹೊತ್ತಿನ ತಿಂಡಿ ಹಾಕಿ ಬೆಳೆಸಿದ ನಾಯಿ ನನ್ನ ಬಿಟ್ಟು, ಒಂದು ನಿಮಿಷವೂ ಬದುಕುತ್ತಿಲ್ಲ ಎಂದು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಗ ನಾಯಿಯೂ ಇವರನ್ನೇ ನೋಡುತ್ತಿತ್ತು.

"ನೋಡಿ ಮಕ್ಕಳೇ ನೀವು ನಿಮ್ಮ ಹೆತ್ತವರಿಗೆ ಎಂದೂ ದ್ರೋಹ ಮಾಡಬಾರದು. ಯಾರು ಹಾಗೆ ಮಾಡುತ್ತಾರೋ ಅವರು ಈ ಲೋಕದಲ್ಲೂ-ಪರಲೋಕದಲ್ಲೂ ನಿಕೃಷ್ಟರಾಗುತ್ತಾರೆ. ಇದಕ್ಕೆ ನನ್ನ ಸ್ಥಿತಿಯೇ ಸಾಕ್ಷಿ" ಎಂದು ಭಾರವಾದ ಹೃದಯದಿಂದ ನುಡಿದರು.

ಆಗ ಶುಜ್ಜ ಮತ್ತು ಮುಖ್ತಾರ್‌ಗೆ ಈ ಮುದುಕ ಸಾಮಾನ್ಯನಲ್ಲ. ಒಂದು ಕಾಲದಲ್ಲಿ ದೊಡ್ಡ ವ್ಯಕ್ತಿತ್ವವನ್ನು ಹೊಂದಿದ್ದರು. ಮಕ್ಕಳ ಭೌತಿಕ ಪ್ರೇಮದಿಂದ ಎಲ್ಲವನ್ನೂ ಕಳಕೊಂಡಿದ್ದಾರೆ ಎಂದು ತಿಳಿಯಿತು. ಶಾಲೆಗೆ ಹೊತ್ತಾದ ಕಾರಣ "ಮತ್ತೆ ಸಿಗುತ್ತೇವೆ ತಾತ!" ಎಂದು ಶಾಲೆಯೆಡೆಗೆ ತೆರಳಿದರು. ಇದುವರೆಗೂ ಯಾರೂ ತನ್ನನ್ನು ಕರೆಯದ 'ತಾತ' ಎಂಬ ಶಬ್ದ ಕಿವಿಗೆ ಬಿದ್ದೊಡನೆ ಸಂತೃಪ್ತಿಯಿಂದ ಮುದುಕ ಕಣ್ಣು ಮುಚ್ಚಿ ಮಲಗಿದರು. ನಾಯಿಯೂ ಅವರ ಹತ್ತಿರವೇ ಆರಾಮವಾಗಿ ನೆಲಕ್ಕಂಟಿ ಮಲಗಿತು. ಮಧ್ಯಾಹ್ನ ಶಾಲೆಯಿಂದ ಇವರು ಹೊರಗೆ ಬಂದಾಗ ಈ ನಾಯಿ ಗೋಗರೆಯುತ್ತಾ ಅದ್ಯಾವುದೋ ಆ್ಯಂಬುಲೆನ್ಸ್‌ನ ಹಿಂದೆ ಬೊಬ್ಬಿಡುತ್ತಾ ಓಡುತ್ತಿತ್ತು. ಹತ್ತಿರದವರಲ್ಲಿ ಕೇಳಿದಾಗ, "ಯಾವುದೋ ಅಪರಿಚಿತ ಮುದುಕ ಈ ಮರದ ಕೆಳಗೆ ಸತ್ತು ಬಿದ್ದಿದ್ದನು" ಎಂದು ತಿಳಿಯಿತು. ಶುಜ್ಜ ಮತ್ತು ಮುಖ್ತಾರ್ ಕಣ್ಣೀರೊರೆಸುತ್ತಾ ಮನೆಯ ಹಾದಿ ಹಿಡಿದರು.

❖

## 6 ಈ ಪರ್ಸ್ ಯಾರದು?

"ಮುಖ್ತಾರ್ ಬೇಗ ಹತ್ತು, ಬೇಗ ಹತ್ತು" ಎನ್ನುತ್ತಾ ಶುಜ್ಜ ಬಸ್ಸನ್ನೇರಿ ಸೀಟಿನಲ್ಲಿ ಕುಳಿತ. ಮುಖ್ತಾರ್ ಹತ್ತಿದಾಗ ಸೀಟೆಲ್ಲಾ ಭರ್ತಿಯಾಗಿತ್ತು. ಮುಖ್ತಾರ್‌ನಿಗೆ ಕೂರಲು ಸೀಟು ಸಿಗಲಿಲ್ಲ. ನಂತರ ಶುಜ್ಜನ ಒತ್ತಾಯಕ್ಕೆ ಮಣಿದು ಆತನ ತೊಡೆಯ ಮೇಲೆ ಕುಳಿತ. ಅಂದು ಆದಿತ್ಯವಾರವಾದ್ದರಿಂದ ಇಬ್ಬರೂ ಹತ್ತಿರದ ಪಾರ್ಕ್‌ಗೆ ಹೋಗಿ ಸಮಯ ಕಳೆಯುವುದು ಎಂದು ತೀರ್ಮಾನಿಸಿದ್ದರು. ಬಸ್ಸು ಮುಂದೆ ಸಾಗುತ್ತಿದ್ದಂತೆ, "ಶುಜ್ಜ ಅಲ್ನೋಡು ಅದೇನೆಂದು ಗೊತ್ತೇ?" ಎಂದು ಮುಖ್ತಾರ್ ಕೇಳಿದನು. "ಇಲ್ಲ" ಎಂದ ಶುಜ್ಜ. "ಅದೂ ಗೊತ್ತಿಲ್ಲವೇ? ಅದು ಏನೆಂದು ನನಗೂ ಗೊತ್ತಿಲ್ಲ" ಎಂದು ಮುಖ್ತಾರ್ ಹೇಳಿ ನಕ್ಕಾಗ ಹತ್ತಿರ ಕೂತಿದ್ದ ಯುವಕನೂ ನಕ್ಕು ಹೇಳಿದ, "ಅದು ಟವರ್, ಮೊಬೈಲ್‌ನ ತರಂಗಗಳನ್ನು ಸೆಳೆಯುವ ಕೆಲಸ ಅದರದು. ಅದರ ಮುಖಾಂತರ ನಮ್ಮ ಮೊಬೈಲ್‌ಗಳಿಗೆ ಫೋನ್ ಕರೆ ಬರುವುದು" ಎಂದು ವಿವರಿಸಿದನು.

ಆಗಲೇ ಬಸ್ಸು ನಿಲ್ದಾಣಕ್ಕೆ ಬಂದಿತ್ತು. ಹತ್ತಿರ ಕೂತ ಸುಮಾರು ಇಪ್ಪತ್ತು ವರ್ಷದ ಯುವಕ ಕೆಳಗಿಳಿದನು. ಮುಖ್ತಾರ್ ಮತ್ತು ಶುಜ್ಜ ಈಗ ಸರಿಯಾಗಿ ಕುಳಿತುಕೊಂಡರು. ಬಸ್ಸು ಸ್ವಲ್ಪ ಮುಂದೆ ಹೋಗಿದೆಯಷ್ಟೆ- ಶುಜ್ಜನ ಕಾಲಿನಡಿಯಲ್ಲಿ ಒಂದು ಪರ್ಸ್ ಕಂಡಿತು. ತೆಗೆದು ನೋಡಿದಾಗ ಅದರಲ್ಲಿ ಐನೂರರ ಕೆಲವು ನೋಟುಗಳಿದ್ದುವು. "ಪಾಪ! ಈಗ ಇಳಿದ ಯುವಕನದ್ದಾಗಿರಬೇಕು" ಎಂದು ಮುಖ್ತಾರ್ ಹೇಳಿದನು. ಹಾಗಾದರೆ ಏನು ಮಾಡುವುದು? ಎಂಬ ಪ್ರಶ್ನೆ ಇಬ್ಬರನ್ನೂ ಕಾಡಿತು. ಬೇಗ ಬಸ್ಸಿನಿಂದ ಇಳಿದು ಯುವಕ ಇಳಿದ ಬಸ್ ನಿಲ್ದಾಣಕ್ಕೆ ನಡೆಯುವುದು ಎಂದು ತೀರ್ಮಾನಿಸಿದರು.

ಹೀಗೆ ಓಡುನಡಿಗೆಯಲ್ಲಿ ಹೋಗುತ್ತಿರುವಾಗ ಶಕೀಬ್ ದೂರದಲ್ಲಿ ವೇಗವಾಗಿ ನಡೆದು ಬರುತ್ತಿರುವುದು ಗೋಚರಿಸಿತು. ಆತನ ಮುಖ ಏನೋ ಚಿಂತೆ ಮತ್ತು ಗೊಂದಲದಲ್ಲಿ ತುಂಬಿದ್ದಂತೆ ಕಾಣುತ್ತಿತ್ತು. ಶುಜ್ಜ ವಿಚಾರಿಸಿದಾಗ, "ತಂದೆ ಬೇಗ ಬರಲು ಹೇಳಿದ್ದಾರೆ, ಏನೋ ಕಳೆದು ಹೋಗಿದೆಯಂತೆ" ಎಂದು ಹೇಳಿ ಓಡಲು ಪ್ರಾರಂಭಿಸಿದನು. ಶುಜ್ಜ ಮತ್ತು ಮುಖ್ತಾರ್ ನಡಿಗೆ ಮುಂದುವರಿಸಿದರು. ದೂರದಲ್ಲಿ

ಬಸ್ ನಿಲ್ದಾಣ ಕಾಣಿಸಿತು. "ಅಗೋ ಆ ಯುವಕ ಅಲ್ಲಿ ನಿಂತಿದ್ದಾನೆ. ಇಷ್ಟು ನಡೆದಿದ್ದಕ್ಕೆ ಸಾರ್ಥಕವಾಯಿತು" ಎಂದು ಮುಖ್ತಾರ್ ಹೇಳಿದಾಗ, "ಪಾಪ ಬಸ್ಸು ಮರಳಿ ಬರುವುದನ್ನೇ ಕಾಯುತ್ತಿರಬೇಕು" ಎಂದು ಶುಜ್ಜ ದನಿಗೂಡಿಸಿದನು.

ಅವನಲ್ಲಿಗೆ ಹೋಗಿ ಅವನ ಹೆಸರು ಕೇಳಿದರು, ಅವನು ಮುನೀರ್ ಎಂದು ಉತ್ತರಿಸಿದನು. ಅವನ ಪರ್ಸನ್ನು ಅವನಿಗೆ ತೋರಿಸಿದರು. ಮುನೀರ್‌ನಿಗೆ ಆಶ್ಚರ್ಯವಾಯಿತು. ಈ ಕಾಲದಲ್ಲೂ ಇಂತಹ ಪ್ರಾಮಾಣಿಕತೆಯೇ? ಆತ ಆಶ್ಚರ್ಯದಿಂದ, "ನೀವು ಈ ಪರ್ಸನ್ನು ನಿಮ್ಮ ಬಳಿಯೇ ಇಟ್ಟಿದ್ದರೆ ಯಾರಿಗೂ ತಿಳಿಯುತ್ತಿರಲಿಲ್ಲವಲ್ಲಾ" ಎಂದು ಕೇಳಿದನು. "ಖಂಡಿತಾ ಯಾರಿಗೂ ತಿಳಿಯುತ್ತಿರಲಿಲ್ಲ. ಆದರೆ ಎಲ್ಲವನ್ನು ತಿಳಿಯುವ, ನೋಡುವ ಅಲ್ಲಾಹನಿಗೆ ತಿಳಿಯುತ್ತಿತ್ತು."

"ದೇವಭಯ ಯಾರಿಗಿದೆ? ನಿಮ್ಮ ಜಾಗದಲ್ಲಿ ಬೇರೆ ಯಾರಾದರೂ ಇದ್ದಿದ್ದರೆ ಖಂಡಿತ ನಿಮ್ಮಂತೆ ಪ್ರಾಮಾಣಿಕತೆ ತೋರಿಸುತ್ತಿರಲಿಲ್ಲ. ಮಜಾ ಮಾಡುತ್ತಿದ್ದರು" ಎಂದು ಯುವಕ ಹೇಳಿದನು.



"ಈ ಹಣವನ್ನು ತೆಗೆದು ನಾವು ಯಾವ ಮಹಾ ಬಂಗಲೆ ಖರೀದಿಸಲಿಕ್ಕಿದೆ? ಅಲ್ಲಾಹನಿಚ್ಛಿಸಿದರೆ ದೊಡ್ಡವರಾಗಿ ಹಲಾಲ್ ಮಾರ್ಗದಲ್ಲಿ ಸಂಪಾದಿಸುವೆವು. ಇಂತಹ ವಂಚನೆಯ ಕೆಲಸ ಖಂಡಿತ ಇಸ್ಲಾಮನ್ನು ಅರಿತವನಿಗೆ ಮಾಡಲು ಸಾಧ್ಯವಿಲ್ಲ. ನಾವು ಮಾಡುವ ಪ್ರತಿಯೊಂದು ಒಳಿತು ಮತ್ತು ಕೆಡುಕುಗಳನ್ನು ಅಲ್ಲಾಹನು ನೋಡುತ್ತಾನೆ. ಅದಕ್ಕೆ ತಕ್ಕ ಪ್ರತಿಫಲವನ್ನು ವಿಚಾರಣೆಯ ದಿನ ಪರಲೋಕದಲ್ಲಿ ಕೊಡುತ್ತಾನೆ. ಅಲ್ಲಾಹನು ಜನರ ಹಕ್ಕುಗಳ ಬಗ್ಗೆ ಸ್ಪಷ್ಟವಾಗಿ ಎಚ್ಚರಿಸಿದ್ದಾನೆ. ಯಾರದಾದರೂ ಹಕ್ಕು ಕಸಿದರೆ ಅವನು ಕ್ಷಮಿಸುವ ತನಕ ಖಂಡಿತಾ ಅಲ್ಲಾಹನು ಕ್ಷಮಿಸುವುದಿಲ್ಲ ಎಂದು ಪ್ರವಾದಿ(ಸ) ಹೇಳಿದ್ದಾರೆ. ಜನರಿಗೆ ತೊಂದರೆ ಕೊಟ್ಟು, ಅನ್ಯಾಯ ಮಾಡಿ ಎಷ್ಟೇ ಆರಾಧನೆ ಮಾಡಿದರೂ ಆತ ದಿವಾಳಿಕೋರನಾಗಿದ್ದಾನೆ. ಅವನ ಪುಣ್ಯ ಕರ್ಮಗಳೆಲ್ಲವೂ ಅಳಿದು, ಪರಲೋಕದಲ್ಲಿ ಅವನು ನಿಂದ್ಯನೂ ನಿಕೃಷ್ಟನೂ ಆಗಿ ನರಕದ ಭಯಾನಕ ಶಿಕ್ಷೆಗೆ ಗುರಿಯಾಗಬೇಕಾದೀತು. ನಾವು ನಿಮ್ಮ ಪರ್ಸನ್ನು ಹಿಂದಿರುಗಿಸಲು ಕಾರಣ ಪ್ರಾಮಾಣಿಕತೆ ಮಾತ್ರವಲ್ಲ ದೇವಭಯದೊಂದಿಗಿನ ವಿಚಾರಣೆಯ ಭಯ" ಎಂದು ಶುಜ್ಞ ಹೇಳಿದಾಗ ಯುವಕ ತಬ್ಬಿಬ್ಬಾಗಿ ಹೋಗಿದ್ದ. ಆತ ಇವರಿಗೆ ಕೃತಜ್ಞತೆ ಸಲ್ಲಿಸಿ ಹೊರಟು ಹೋದ.

ಶುಜ್ಞ ಮತ್ತು ಮುಖ್ತಾರ್ ಪಾರ್ಕ್‌ನೆಡೆಗೆ ತೆರಳಿದರು. ಮಗ್ರಿಬ್ ನಮಾಝ್ ಸಮಯಕ್ಕಿಂತ ಮೊದಲು ಆಟ ಮುಗಿಸಿ ಮನೆಯೆಡೆಗೆ ತೆರಳಿದರು. ಆಗ ಪುನಃ ಶಕೀಬ್ ಮಾರ್ಗದಲ್ಲಿ ನಡೆದು ಬರುತ್ತಿದ್ದುದು ಕಾಣಿಸಿತು. ಆದರೆ ಈಗ ಅವನ ಮುಖ ಬಹಳ ಸಂತೋಷದಲ್ಲಿದ್ದಂತೆ ಭಾಸವಾಗುತ್ತಿತ್ತು. ಮುಖ್ತಾರ್ ಅವನನ್ನು ತಡೆದು, "ಆಗ ಬಹಳ ಚಿಂತೆಯಲ್ಲಿದ್ದೆ. ಈಗ ಬಹಳ ಸಂತೋಷದಲ್ಲಿದ್ದೀಯಾ! ಏನು ಸಮಾಚಾರ" ಎಂದು ಕೇಳಿದಾಗ, "ಅದಾ... ಬೆಳಗ್ಗೆ ನಮ್ಮ ಆಫೀಸಿನಲ್ಲಿ ಕೆಲಸಕ್ಕಿದ್ದ ಮುನೀರ್ ಎಂಬ ಯುವಕ ತಂದೆಯ ಪರ್ಸ್ ಕದ್ದು ಓಡಿದ್ದನು. ತಂದೆಗೆ ಯಾರು ತೆಗೆದದ್ದೆಂದು ತಿಳಿದಿರಲಿಲ್ಲ. ನನ್ನನ್ನು ಹುಡುಕಲಿಕ್ಕಾಗಿ ಕರೆದಿದ್ದರು. ಸ್ವಲ್ಪ ಹೊತ್ತಿನ ಬಳಿಕ ಅವನೇ ಬಂದು ತಂದೆಯವರಲ್ಲಿ ಅತ್ತು ಕ್ಷಮೆ ಕೇಳಿ ಪರ್ಸನ್ನು ಮರಳಿಸಿದನು. ತಂದೆಯವರಿಗೆ ಅವನ ಪ್ರಾಮಾಣಿಕತೆ ಮತ್ತು ಪಶ್ಚಾತ್ತಾಪದ ಅರಿವಾದ ಕಾರಣ ಅವನ ಮೇಲೆ ಕೋಪ ಬರಲಿಲ್ಲ. ಅವನನ್ನು ಕ್ಷಮಿಸಿದರು" ಎಂದು ಶಕೀಬ್ ಉತ್ತರಿಸಿದಾಗ ಶುಜ್ಞ ಮತ್ತು ಮುಖ್ತಾರ್ ಮುಖಮುಖ ನೋಡಿ ಅಲ್ಲಾಹನನ್ನು ಸ್ತುತಿಸಿ ನಕ್ಕು ಬಿಟ್ಟರು.

❖

# 7 ಸಾಚಾಪುರದ ವಿದ್ವಾಂಸ

**ಹೋ**ಗಬೇಕೋ ಬೇಡವೋ ಎಂದು ರೈಮಾನಜ್ಜ ಯೋಚಿಸುತ್ತಿದ್ದರು. ರೈಮಾನಜ್ಜ ಆ ಊರನ್ನು ನೋಡದೆ ತುಂಬಾ ಸಮಯವಾಗಿತ್ತು. ರೈಮಾನಜ್ಜನನ್ನು ಕಾಣದೆ ಮಕ್ಕಳಿಗೂ ಬೇಸರವಾಗಿತ್ತು. ರೈಮಾನಜ್ಜ ಯೋಚಿಸುತ್ತಲೇ ಪಕ್ಕನೆ ಎದ್ದು ಹತ್ತಿರದ ಊರಿಗೆ ನಡೆಯಲು ಪ್ರಾರಂಭಿಸಿದರು. ಊರಿಗೆ ತಲುಪಿದೊಡನೆಯೇ ಕಥೆ ಹೇಳಲು ಕುಳಿತುಕೊಳ್ಳುವ ಕಟ್ಟೆಯಲ್ಲಿ ಕೂತು ಸುತ್ತಮುತ್ತ ನೋಡಿದರು. ಇಡೀ ಊರಲ್ಲಿ ಮಕ್ಕಳೇ ಕಾಣಿಸುತ್ತಿಲ್ಲ. ರೈಮಾನಜ್ಜ ಇಂದು ಒಳ್ಳೆಯ ಕಥೆ ಹೇಳಲು ಬಂದಿದ್ದರು. ಮಕ್ಕಳನ್ನು ಕಾಣದೆ ತುಂಬಾ ಬೇಸರವಾಯಿತು.

ಕೂತಲ್ಲಿಂದ ಹಿಂತಿರುಗಲು ಎದ್ದಾಗ, "ಓ ಅಲ್ಲಿ ನೋಡು ರೈಮಾನಜ್ಜ" ಎಂದು ಐಮನ್ ಓಡಿ ಬರುತ್ತಿದ್ದುದನ್ನು ನೋಡಿದ ಶಹಾದತ್ ಅವನನ್ನು ಹಿಂದಿಕ್ಕಲು ಪ್ರಯತ್ನಿಸಿ ರೈಮಾನಜ್ಜನ ಬಳಿ ಓಡಿ ಬಂದನು. ಇವರ ಬೊಬ್ಬೆ ಕೇಳಿದ್ದೇ ತಡ, ನಾಲ್ಕೂ ಕಡೆಯಿಂದ ಮಕ್ಕಳ ದಂಡೇ ಓಡಿ ಬಂದು ರೈಮಾನಜ್ಜನ ಸುತ್ತ ನೆರೆಯಿತು. ರೈಮಾನಜ್ಜನ ಕಥೆಗೆ ಆಧುನಿಕ ಟಿ.ವಿ.ಗಿಂತಲೂ ಆಕರ್ಷಿಸುವ ಶಕ್ತಿಯಿತ್ತು ಎಂಬುದಕ್ಕೆ ಇದುವೇ ಸಾಕ್ಷಿ. "ರೈಮಾನಜ್ಜ ಹಿಂದಿನಂತೆ ಆಡಿನ ಕಥೆ ಹೇಳಬಾರದು. ಇಂದು ಬೇರೆ ಕಥೆ ಹೇಳಬೇಕು" ಎಂದು ಶುಜ್ಜ ಹೇಳಿದಾಗ ಕಥೆ ರೈಮಾನಜ್ಜರ ಗಂಟಲಿನ ವರೆಗೆ ಬಂದಿತ್ತು. ಅವರು ತಮ್ಮ ಊರುಗೋಲನ್ನು ಬದಿಯಲ್ಲಿಟ್ಟು ಕನ್ನಡಕವನ್ನು ಸರಿಪಡಿಸುತ್ತಾ ಹೇಳಲಾರಂಭಿಸಿದರು-

ಒಂದು ಊರಿನಲ್ಲಿ ಒಬ್ಬ ಸಜ್ಜನರಿದ್ದರು. ಅವರಿಗೆ ಮೂರು ಗಂಡು ಮಕ್ಕಳು. ಅವರು ತನ್ನ ಮಕ್ಕಳನ್ನು ಪರೀಕ್ಷಿಸಲು ಬಯಸಿದ್ದರು. "ಸಾಚಾಪುರ ಎಂಬ ಊರಿಗೆ ಹೋಗಬೇಕು. ಅಲ್ಲೊಬ್ಬರು ವಿದ್ವಾಂಸರಿದ್ದಾರೆ. ಅವರು ಹಲವಾರು ಪುಸ್ತಕ, ಗ್ರಂಥಗಳನ್ನು ಬರೆದಿದ್ದಾರೆ. ಅವರ ಕುರಿತು ನನಗೆ ಮಾಹಿತಿ ತರಬೇಕು" ಎಂದು ಮಕ್ಕಳಲ್ಲಿ ಹೇಳಿದರು. ಆ ಊರು ಬಹಳ ದೂರವಿತ್ತು. ಮೊದಲು ದೊಡ್ಡವನನ್ನು ಕಳಿಸಿದರು. ಆತ ಆ ಊರಿಗೆ ಪ್ರಯಾಣ ಬೆಳೆಸಿದನು.

ಆ ಊರು ತಲುಪುದಕ್ಕಿಂತ ಮೊದಲೇ ಹಲವರು ಅವನಿಗೆ ಸಿಕ್ಕಿದರು. ಅವರು "ಆ ವಿದ್ವಾಂಸನ ಬಳಿ ಹೋಗಬೇಡ, ಅವರ ಪುಸ್ತಕದಲ್ಲಿ ಅವರು, ಏನೇನೋ

ಬರೆದಿದ್ದಾರೆ" ಎಂದು ಹೇಳಿದರು. ಆತ ಅಲ್ಲಿಂದ ಮರಳಿ ಮನೆಗೆ ಬಂದು, "ಅಪ್ಪ ಆ ವಿದ್ವಾಂಸ ಸರಿಯಿಲ್ಲ. ಅವರ ಪುಸ್ತಕಗಳಲ್ಲಿ ಏನೇನೋ ತಪ್ಪುಗಳಿವೆಯಂತೆ" ಎಂದು ಹೇಳಿದನು.

ತಂದೆ ತನ್ನ ಎರಡನೆಯ ಮಗನನ್ನು ಕಳಿಸಿದರು. ಈತನೂ ಆ ಊರಿಗೆ ಪ್ರಯಾಣ ಬೆಳೆಸಿದನು. ದಾರಿ ಮಧ್ಯದಲ್ಲಿ ಕೆಲವರು ಅವನಿಗೆ ಹೇಳಿದರು, "ಆ ವಿದ್ವಾಂಸನ ಮಾತು ಕೇಳಬೇಡ. ಅವರು ಸರಿಯಿಲ್ಲ. ಅವರ ಮಾತಿನ ಮೋಡಿಗೆ ಸಿಲುಕಿ ಅನೇಕ ಮಂದಿ ದಾರಿ ತಪ್ಪಿದ್ದಾರೆ. ಬೇಕಾದರೆ ನಮ್ಮ ಭಾಷಣಕಾರನಲ್ಲಿ ಕೇಳಿ. ಆ ವಿದ್ವಾಂಸನ ನಿಜಬಣ್ಣ ಬಯಲಾಗುತ್ತದೆ" ಎಂದು ಹೇಳಿದರು. ಈತ ಭಾಷಣಕಾರನ ಮಾತು ಕೇಳಿ ಮನೆಗೆ ಹಿಂತಿರುಗಿದನು. ತಂದೆ ಕೇಳಿದಾಗ "ಅಪ್ಪ ಆ ವಿದ್ವಾಂಸ ಸರಿಯಿಲ್ಲಪ್ಪ. ನನಗೆ ಒಬ್ಬ ಭಾಷಣಕಾರನಿಂದ ಆ ವಿದ್ವಾಂಸರ ತಪ್ಪುಗಳು, ಅವರ ಪುಸ್ತಕದಲ್ಲಿರುವ ದೋಷಗಳು ತಿಳಿಯಿತು. ಆತನ ಬಳಿ ಹೋಗದಂತೆ ಮಾಡಿದ ಅಲ್ಲಾಹನಿಗೆ ಕೃತಜ್ಞತೆ" ಎಂದು ಹೇಳಿದನು.

ತಂದೆ ತನ್ನ ಕಿರಿಯ ಮಗನನ್ನು ಕಳುಹಿಸಿದರು. ಕಿರಿಯ ಮಗ ಸಾಬಾಪುರಕ್ಕೆ ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಅವನಿಗೆ ಕೆಲವರು ಸಿಕ್ಕಿದರು. ಅವರು "ಆ ವಿದ್ವಾಂಸನ ಬಳಿ ಹೋಗಬೇಡ. ಅವರು ಗ್ರಂಥದಲ್ಲಿ ತಪ್ಪುತಪ್ಪು ಬರೆದಿದ್ದಾರೆ" ಎಂದು ಹೇಳಿದರು. ಈತ ಇದನ್ನು ಲೆಕ್ಕಿಸದೆ ಮುಂದೆ ಸಾಗಿದನು. ಅಲ್ಲಿ ಮತ್ತೆ ಕೆಲವರು ಸಿಕ್ಕಿದರು. ಅವರು ಇವನಲ್ಲಿ, "ನಮ್ಮ ಭಾಷಣಕಾರನ ಮಾತು ಕೇಳು. ಆ ವಿದ್ವಾಂಸನ ನಿಜಬಣ್ಣ ಬಯಲಾಗುತ್ತದೆ" ಎಂದರು. ಈತ ತದೇಕ ಚಿತ್ತದಿಂದ ಭಾಷಣವನ್ನೇ ಆಲಿಸಿದನು.

ಈತನಿಗೆ ತಂದೆ ಹೇಳಿದ ವಿದ್ವಾಂಸನ ಮೇಲೆ ವಿಪರೀತ ಸಿಟ್ಟು ಬಂತು. "ಆ ವಿದ್ವಾಂಸನ ಬಳಿಗೆ ಹೋಗುವುದಕ್ಕಿಂತ ಮನೆಗೆ ಹಿಂತಿರುಗುವುದೇ ಲೇಸು" ಎಂದುಕೊಂಡು ಹಿಂತಿರುಗಿದನು. ದಾರಿ ಮಧ್ಯದಲ್ಲಿ ವೃದ್ಧರೊಬ್ಬರೊಂದಿಗೆ ಮಾತುಕತೆ ನಡೆದಾಗ ವೃದ್ಧ, "ನೀನು ಅವರನ್ನೊಮ್ಮೆ ಭೇಟಿಯಾಗು, ಕಿವಿಯಿಂದ ಕೇಳುವುದಕ್ಕೂ ಕಣ್ಣಾರೆ ನೋಡುವುದಕ್ಕೂ ತುಂಬಾ ವ್ಯತ್ಯಾಸವಿದೆ" ಎಂದಾಗ ಈತ ಪುನಃ ಸಾಬಾಪುರಕ್ಕೆ ಪ್ರಯಾಣ ಬೆಳೆಸಿದನು.

ಗಂಭೀರತೆ ತುಂಬಿದ ಮುಖ, ಆ ಮುಖದಲ್ಲಿ ಬಿಳಿಗಡ್ಡ, ಆಕರ್ಷಕ ನಡಿಗೆ, ಬಿಳಿ ಟೊಪ್ಪಿಯನ್ನು ಧರಿಸಿದ್ದ ವಿದ್ವಾಂಸನನ್ನು ಕಂಡ ಈತನಿಗೆ ಅವರನ್ನು ಇನ್ನೂ ಹತ್ತಿರದಿಂದ ನೋಡ ಬೇಕೆಂದೆನಿಸಿತು. ಹತ್ತಿರ ಹೋದಾಗ ವಿದ್ವಾಂಸರು ಕುರ್ಚಿಯಲ್ಲಿ ಕೂತು ತನ್ನ ಸಹಚರರಿಗೆ ಪ್ರವಚನ ನೀಡುತ್ತಿದ್ದರು. ಈತನೂ ಅವರೊಂದಿಗೆ ಸೇರಿ ಅವರ ಮಾತನ್ನು ಗಮನವಿಟ್ಟು ಆಲಿಸಿದನು. ಈತನಿಗೆ ಆಶ್ಚರ್ಯವಾಯಿತು.

ಇದೆಂತಹ ಭಾಷಣ. ಇದರಲ್ಲಿ ಯಾರಿಗೂ ಬೈಗುಳವಿಲ್ಲ. ಯಾರನ್ನೂ ಮೂದಲಿಸುತ್ತಿಲ್ಲ. ಯಾರನ್ನೂ ಕೀಳಾಗಿ ಹೇಳುತ್ತಿಲ್ಲ. ಕೇಳಲು ಉತ್ತಮವಾದ ಮನಮುಟ್ಟುವ ಮಾತುಗಳನ್ನು ಮಾತ್ರ ಆಡುತ್ತಿದ್ದಾರೆ. ಭಾಷಣ ಮುಗಿದಂತೆ ಸಭಿಕರು ಪ್ರಶ್ನೆಗಳನ್ನು ಕೇಳುತ್ತಿದ್ದರು. ಈತ ಎದ್ದು, "ವಿದ್ವಾಂಸರೇ, ಕೆಲವರು ನಿಮ್ಮನ್ನು ಬಯ್ಯುತ್ತಾರೆ. ತಾವು ಅವರ ಕುರಿತು ಏನೂ ಚಕಾರವೆತ್ತಲಿಲ್ಲ. ಅವರಿಗೆ ಯಾಕೆ ಉತ್ತರ ಕೊಡುವುದಿಲ್ಲ?" ಎಂದು ಕೇಳಿದನು.

ಅದಕ್ಕವರು, "ಬಯ್ಯುವವರಿಗೆಲ್ಲಾ ಉತ್ತರ ನೀಡುವುದು ನಮ್ಮ ಕೆಲಸವಲ್ಲ. ನಾವೂ ಅವರಂತೆ ಬಯ್ಯಲು ಆರಂಭಿಸಿದರೆ, ನಮ್ಮ ಮತ್ತು ಅವರ ಮಧ್ಯೆ ವ್ಯತ್ಯಾಸವೇನಿರುತ್ತದೆ? ಪ್ರವಾದಿ(ಸ) ಯಾರಿಗೂ ಬಯ್ಯಲಿಲ್ಲ. ಬಯ್ಯುವವರಿಗೆ ಎಂದೂ ತಿರುಗಿ ಬಯ್ದು ಉತ್ತರ ಕೊಡಲಿಲ್ಲ. ನಾನು ಕೂಡಾ ಪ್ರವಾದಿವರ್ಯರ(ಸ) ಚರ್ಯೆಯನ್ನು ಪಾಲಿಸುತ್ತಿದ್ದೇನೆ" ಎಂದಾಗ ಈತ, "ಇಲ್ಲ ವಿದ್ವಾಂಸರೇ, ನೀವು ಉತ್ತರಿಸಬೇಕು" ಎಂದು ಪುನಃ ಹೇಳಿದಾಗ ವಿದ್ವಾಂಸರು, "ನೋಡಿ, ಒಮ್ಮೆ ನೀರಿನಲ್ಲಿ ಒಂದು ಚೇಳು ಬಿದ್ದಿತ್ತು. ಅದು ತನ್ನ ರಕ್ಷಣೆಗಾಗಿ ಒದ್ದಾಡುತ್ತಿತ್ತು. ಒಬ್ಬರು ಅದನ್ನು ತೆಗೆದು ರಕ್ಷಿಸಲು ಪ್ರಯತ್ನಿಸುತ್ತಿದ್ದರು. ಎತ್ತಿದಂತೆ ಆ ಚೇಳು ಅವರ ಕೈಯನ್ನೇ ಕಚ್ಚುತ್ತಿತ್ತು. ಅವರು ಪುನಃಪುನಃ ಎತ್ತುತ್ತಿದ್ದರು. ಚೇಳು ಪುನಃ ಪುನಃ ಕಚ್ಚಿ ನೀರಿಗೆ ಬೀಳುತ್ತಿತ್ತು. ಈ ಕುರಿತು ಅವರಲ್ಲಿ ಕೇಳಿದಾಗ ಚೇಳಿನ ಸ್ವಭಾವ ಕಚ್ಚುವಂತಹದ್ದು. ನನ್ನ ಸ್ವಭಾವ ರಕ್ಷಿಸುವಂತಹದ್ದು. ಚೇಳು ತನ್ನ ಸ್ವಭಾವವನ್ನು ಮಾಡುತ್ತಿದೆ. ನಾನು ನನ್ನ ಸ್ವಭಾವವನ್ನು ಮುಂದುವರಿಸುತ್ತಿರುವೆನು" ಎಂದು ಹೇಳಿದರು.

ಆಗ ಈತ, "ವಿದ್ವಾಂಸರೇ ನನಗೆ ನಿಮ್ಮ ಕೃತಿಗಳನ್ನು ಅಭ್ಯಸಿಸಬೇಕು" ಎಂದನು. ಆಗ ಅವರು, "ಅದೋ ಅಲ್ಲಿ, ನನ್ನದು ಮಾತ್ರವಲ್ಲ, ಹಲವು ವಿದ್ವಾಂಸರ ಕೃತಿಗಳಿವೆ. ನೀವು ಓದಬಹುದು" ಎಂದು ಮಂದಹಾಸ ಬೀರುತ್ತಾ ಹೇಳಿದರು. ಈತ ಪುಸ್ತಕಗಳನ್ನು ಕೂಲಂಕಷವಾಗಿ ಅಧ್ಯಯನ ನಡೆಸಿದ. ಈತನ ಸಂಶಯ ನಿವಾರಣೆಯಾಯಿತು. ಕೆಲವು ದಿನಗಳು ಅಲ್ಲಿದ್ದು ಜ್ಞಾನಗಳಿಸಿ ತನ್ನ ಮನೆಗೆ ಮರಳಿದನು. ಮನೆಗೆ ಬಂದಾಗ ತಂದೆಯವರು ವಿದ್ವಾಂಸನ ಕುರಿತು ವಿಚಾರಿಸಿದರು.

ಆಗ ಈತ, "ಅಪ್ಪ, ನನ್ನ ಇಬ್ಬರು ಅಣ್ಣಂದಿರ ಬಗ್ಗೆ ನನಗೆ ಕನಿಕರವಾಗುತ್ತದೆ. ಅವರು ಊಹಾಪೋಹಕ್ಕೆ ಬಲಿಯಾಗಿ ವಿದ್ವಾಂಸರನ್ನು ಅರಿಯದೇ ಬಂದರು. ಅಂಧಾನುಕರಣೆಯಿಂದಾಗಿ ಅವರು ಹಲವಾರು ವಿಷಯಗಳಿಂದ ವಂಚಿತರಾದರು. ನಾನು ಕೂಡಾ ಇವರಂತೆ ಮರಳುವವನಿದ್ದೆ. ಆದರೆ ನನಗೆ ಅವರನ್ನು ಭೇಟಿಯಾಗಿ ಮಾತನಾಡಲು ಸಾಧ್ಯವಾಯಿತು. ಅಪ್ಪಾ, ನಿಮ್ಮಲ್ಲಿ ನಾನು ಹೇಳುವುದೇನೆಂದರೆ ಅವರ



ಕುರಿತು ನಾನು ಹೇಳುವುದಕ್ಕಿಂತ ನೀವೇ ಅವರನ್ನು ಕಾಣಿರಿ. ಅವರ ಕೃತಿಗಳ ಕುರಿತು ಅಭ್ಯಸಿಸಿರಿ. ಯಾರದೇ ಮಾತಿಗೆ ಸಿಲುಕಿ ಸತ್ಯವನ್ನು ಕಣ್ಣಾರೆ ಕಾಣದೆ ನಿರ್ಧಾರ ಕೈಗೊಳ್ಳುವುದು ಸರಿಯಾದುದಲ್ಲ ಎಂಬ ಪಾಠ ನನಗೆ ಇದರಿಂದ ಸಿಕ್ಕಿತು" ಎಂದನು.

ರೈಮಾನಜ್ಜ ಕಥೆ ಮುಗಿಸಿ, "ಮಕ್ಕಳೇ ನೀವು ಈ ಮೂವರಲ್ಲಿ ಯಾರಂತೆ ಆಗಲು ಬಯಸುತ್ತೀರಿ" ಎಂದು ಕೇಳಿದಾಗ ಎಲ್ಲರೂ ಒಕ್ಕೊರಳಿನಿಂದ "ಕಿರಿಯ ಮಗ, ಕಿರಿಯ ಮಗ" ಎಂದು ಹೇಳಿದರು. ಆಗ ಶುಜ್ಜ ಎದ್ದು ನಿಂತು, "ರೈಮಾನಜ್ಜ ಇನ್ನು ನೀವು ಏನೇ ಹೇಳಿದರೂ ನಾವು ಒಪ್ಪುವುದಿಲ್ಲ. ಅದರ ಕುರಿತು ಸಂಶೋಧನೆ ನಡೆಸಿ ಸತ್ಯವಾದರೆ ಮಾತ್ರ ಸ್ವೀಕರಿಸುತ್ತೇವೆ" ಎಂದಾಗ ರೈಮಾನಜ್ಜ, "ಹಾಗಾದರೆ ನನಗಿಂತ ನೀವೇ ಜಾಣರು" ಎಂದು ನಗುತ್ತಾ ಮುಂದೆ ಸಾಗಿದರು.

❖

# 8 ಹೆಣ್ಣು ಕರು

ಏಳನೆಯ ಕ್ಲಾಸಿನಲ್ಲಿ ಕಲಿಯುತ್ತಿದ್ದ ಶಾಝಿ, ಅಜ್ಜಿ ಮನೆಗೆ ಹೋಗುವ ಕಾತರದಲ್ಲಿದ್ದಳು. ಶಾಲೆಗೆ ರಜೆ ಸಿಕ್ಕಿತೆಂದರೆ ಅವಳಿಗೆ ಭಾರೀ ಖುಷಿ. ಹಳ್ಳಿಯಲ್ಲಿರುವ ಮರಗಳು, ಬೆಟ್ಟಗಳು, ಸ್ನೇಹಿತರು ಅದಕ್ಕಿಂತಲೂ ಪ್ರಿಯವಾದ ಅಜ್ಜಿಯನ್ನು ನೆನೆಯುತ್ತಾ ಬಸ್ಸಿನಲ್ಲಿ ಕೂತಿದ್ದಳು. ಅವಳ ತಮ್ಮ ಶುಜ್ಜ ಕೂಡಾ ಜತೆಗಿದ್ದನು. ಬಸ್ಸು ಮರ, ಬೆಟ್ಟ-ಗುಡ್ಡಗಳನ್ನು ದಾಟುತ್ತಾ ಮಧ್ಯಾಹ್ನದ ಹೊತ್ತಿಗೆ ತಲುಪಿತು. ಶಾಝಿ ಬಂದದ್ದು ಕಂಡು ಅಮಾನಳಿಗೆ ಬಹಳ ಸಂತೋಷವಾಯಿತು. ಪಟಪಟ ಇಂಗ್ಲೀಷ್ ಮಾತನಾಡುವ ಪಟ್ಟಣದ ಸ್ನೇಹಿತೆ. ಅವಳ ಮಾತು ಅಮಾನಳಿಗೆ ಬಹಳ ಆನಂದ ಕೊಡುತ್ತಿತ್ತು.

ಮನೆಗೆ ಬಂದೊಡನೆ "ಶಾಝಿ, ನಮ್ಮ ಹಸು ಇಂದು ಕರು ಹಾಕುತ್ತದೆ" ಎಂದು ಅಮಾನ ಹೇಳಿದಾಗ ಶಾಝಿಯ ಹಿಗ್ಗು ಇನ್ನೂ ಇಮ್ಮಡಿಯಾಯಿತು. ಮಗ್ರಿಬ್ ನಮಾಝ್‌ನ ಸಮಯದಲ್ಲಿ ಅಜ್ಜಿ ಆಕಳಿಗೆ ಹುಲ್ಲು ಹಾಕುತ್ತಾ ಅದರ ಮೈಯನ್ನೆಲ್ಲಾ ಸವರುತ್ತಿದ್ದರು. ಮನೆಯೊಳಗೆ ಎಲ್ಲರೂ 'ಹೆಣ್ಣೋ-ಗಂಡೋ' ಎಂಬ ಚರ್ಚೆ ನಡೆಸುತ್ತಿದ್ದರು. ಅಮಾನ 'ಹೆಣ್ಣು' ಎಂದಾಗ ಶಾಝಿಗೆ ಸಂತೋಷವಾಯಿತು. ಅಂತೂ ರಾತ್ರಿಯ ಹೊತ್ತಿಗೆ ಆಕಳು ಕರು ಹಾಕಿತು. ಅಜ್ಜಿ ಬೇಗ ಕರುವಿನ ಬಳಿ ಬಂದು ಪರೀಕ್ಷಿಸಿ 'ಹೆಣ್ಣು ಕರು' ಎಂದು ಸಂತೋಷದಿಂದ ಹೇಳಿದರು. ಇಡೀ ಮನೆಯಲ್ಲಿ ಸಂತೋಷದ ವಾತಾವರಣ. ಈ ಹಳ್ಳಿಗರ ಸಂತೋಷ ಕಂಡು ಶಾಝಿಗೆ ಕುತೂಹಲವಾಯಿತು. ಆಕೆ ಅಜ್ಜಿಯಲ್ಲಿ, "ಹೆಣ್ಣಾದರೆ ಯಾಕೆ ಇಷ್ಟು ಸಂತೋಷ?" ಎಂದು ಕೇಳಿದಳು. ಅದಕ್ಕೆ ಅಜ್ಜಿ "ಗೊತ್ತಿಲ್ವಾ? ಹೆಣ್ಣಾದ್ರೆ ಹಾಲು ಕೊಡುತ್ತೆ, ಕರು ಹಾಕುತ್ತೆ, ಮತ್ತೆ ಮನೆ ತುಂಬಾ ದನ, ಕರುಗಳು ತುಂಬುತ್ತೆ" ಎಂದು ಹೇಳಿದರು.

ಆಗ ಶಾಝಿ, "ಈ ಸಮಾಜದಲ್ಲಿ ಕರುವಿಗಿರುವ ಸ್ಥಾನ ಹೆಣ್ಣು ಮಗುವಿಗಿಲ್ಲ" ಎಂದು ಹೇಳಿದಾಗ, ಇಷ್ಟು ಚಿಕ್ಕ ಹುಡುಗಿ ಈ ರೀತಿ ಮಾತಾಡುವುದನ್ನು ಕಂಡು ಅಜ್ಜಿ ಬೆರಗಾದರು. ಮೊನ್ನೆ ತಾನೇ 'ಭ್ರೂಣ ಹತ್ಯೆ ಮತ್ತು ವರದಕ್ಷಿಣೆ'ಯ ಕುರಿತು ಮಾಹಿತಿಯನ್ನು ತಿಳಿಸಲು ಸಂಘಟನೆಯೊಂದರ ಕಾರ್ಯಕರ್ತರು ಶಾಲೆಗೆ ಬಂದಿದ್ದರು. ಆದುದರಿಂದ ಶಾಝಿಯ ಬಾಯಲ್ಲಿ ಈ ಮಾತು ಸಹಜ. ಆಕೆಗೆ ಇತ್ತೀಚೆಗೆ



ವರದಕ್ಷಿಣೆ ಕಿರುಕುಳದಲ್ಲಿ ಸತ್ತ ರುಕ್ಕುವಿನ ನೆನಪಾಯಿತು. ಅಜ್ಜಿಮನೆಯಲ್ಲಿ ಶಾರ್ಝ ಮಲಗುವುದು ಅಜ್ಜಿಯೊಂದಿಗೆ, ಅಜ್ಜಿ ಈಕೆಗೆ ಪ್ರವಾದಿಗಳ ಘಟನೆ ತಿಳಿಸುತ್ತಿದ್ದರು. ಅಜ್ಜಿ ಹೇಳಲಾರಂಭಿಸಿದರು-

ಒಬ್ಬನು ಪ್ರವಾದಿಯವರ(ಸ) ಬಳಿ ಬಂದು ಅಜ್ಞಾನ ಕಾಲದ ಘಟನೆಯನ್ನು ಹೇಳಿದನು: ನನಗೆ ಒಬ್ಬಳು ಮಗಳಿದ್ದಳು. ಆಕೆ ನನ್ನನ್ನು ಬಹಳ ಪ್ರೀತಿಸುತ್ತಿದ್ದಳು. ನಾನು ಕರೆದಾಗ ಸಂತೋಷದಿಂದ ಓಡೋಡಿ ನನ್ನ ಬಳಿ ಕೂರುತ್ತಿದ್ದಳು. ಹೀಗೆ ಅವಳು ಸ್ವಲ್ಪ ದೊಡ್ಡವಳಾದಾಗ ನಾನು ಆಕೆಗೆ ಬಟ್ಟೆ ತೊಡಿಸಿ ಒಂದು ನಿರ್ಜನ ಪ್ರದೇಶಕ್ಕೆ ಕರೆದು ಕೊಂಡು ಹೋದೆ. ಒಂದು ಸ್ಥಳದಲ್ಲಿ ಆಕೆಯನ್ನು ಕೂರಿಸಿ ಹೊಂಡ ತೋಡಲು ಆರಂಭಿಸಿದೆ. ಹೀಗೆ ಹೊಂಡ ತೋಡಿ ದಣಿವಾರಿಸಲಿಕ್ಕಾಗಿ ಕೂತಾಗ ಆ ಮಗು ಬಂದು ನನ್ನ ಬೆನ್ನಿನಲ್ಲಿದ್ದ ಮರಳನ್ನು ಕೈಯಿಂದ ಒರೆಸುತ್ತಿತ್ತು. ಅಪ್ಪನಲ್ಲವೇ? ಅಪ್ಪನ ಮೇಲಿನ ಮಗುವಿಗಿದ್ದ ಪ್ರೀತಿಯದು. ಹೊಂಡ ತೋಡಿ ಆದ ಬಳಿಕ ನಾನು ಮಗುವನ್ನು ಹೊಂಡಕ್ಕೆ ದೂಡಿ ಮಣ್ಣು ಹಾಕಿ ಮುಚ್ಚಲಾರಂಭಿಸಿದೆ. ಆಗ ಆ ಮಗು 'ಅಪ್ಪಾ, ಅಪ್ಪಾ' ಎಂದು ಕೂಗುತ್ತಿತ್ತು. ಆ ಮಗು ಕರುಣೆಯಿಲ್ಲದ ಅಪ್ಪನ ಕ್ರೌರ್ಯವನ್ನು ಕಾಣುತ್ತಿತ್ತು. ಆ ಮಗುವಿನ ಕೊನೆಯ 'ಅಪ್ಪಾ' ಎಂಬ ಸದ್ದು

ಕೇಳುವ ವರೆಗೂ ಮಣ್ಣು ಹಾಕಿಯೇ ಬಿಟ್ಟೆ. ಇದನ್ನು ಕೇಳಿದಾಗ ಪ್ರವಾದಿ(ಸ) ತನ್ನ ಗಡ್ಡತೊಯ್ದು ಹೋಗುವಷ್ಟು ಅತ್ತು ಬಿಟ್ಟರು. ಪ್ರವಾದಿ(ಸ) ಹೇಳಿದರು, " ನಿನ್ನನ್ನು ಯಾವ ಅಪರಾಧಕ್ಕಾಗಿ ಕೊಲ್ಲಲಾಯಿತೆಂದು, ಪರಲೋಕದಲ್ಲಿ ಆ ಹೆಣ್ಣು ಮಗುವಿನೊಂದಿಗೆ ಕೇಳಲಾಗುವುದು." ಹೀಗೆ ಹೆಣ್ಣು ಮಗುವನ್ನು ಹೂಳುವ ಸಂಸ್ಕೃತಿಯನ್ನು ಪ್ರವಾದಿವರ್ಯರು(ಸ) ಸಂಪೂರ್ಣ ಅಳಿಸಿ ಹಾಕಿದರು. ಎಲ್ಲಿಯ ವರೆಗೆಂದರೆ ಸಮಾಜದಲ್ಲಿ ರಾತ್ರಿ ಹೊತ್ತು ಒಬ್ಬಂಟಿ ಮಹಿಳೆ ನಿರ್ಭಯವಾಗಿ ಯಾತ್ರೆ ಮಾಡುವ ಸಂದರ್ಭವನ್ನು ಒದಗಿಸಿದರು. ಆಕೆಗೆ ಆಸ್ತಿಯಲ್ಲಿ ಹಕ್ಕನ್ನು ಕಲ್ಪಿಸಿಕೊಟ್ಟರು. ಅವರಿಗಾಗಿ 'ಮಹರ್'ನ್ನು(ವಧುದಕ್ಷಿಣೆ) ನಿಶ್ಚಯಿಸಿದರು. ಆದರೆ ಇಂದು ಜನರು ವರದಕ್ಷಿಣೆ, ಭ್ರೂಣ ಹತ್ಯೆಯಿಂದ ಹೆಣ್ಣು ಮಕ್ಕಳನ್ನು ಶೋಷಿಸುತ್ತಿದ್ದಾರೆ. ಇಸ್ಲಾಮಿನ ನಿಯಮಗಳನ್ನು ಪಾಲಿಸಿದರೆ ಖಂಡಿತಾ ಈ ರೀತಿ ಮಾಡಲು ಸಾಧ್ಯವಿಲ್ಲ ಎಂದು ಅಜ್ಜಿ ಹೇಳುತ್ತಿರುವಾಗಲೇ ಶಾಝಿ ಕನಸಿನ ಲೋಕಕ್ಕೆ ಹಾರಿದ್ದಳು.

❖

# 9 ಹೇಂಟೆ ಮತ್ತು ಮರಿಗಳು

**ಗ**ಂಟೆ ಸುಮಾರು ಹನ್ನೆರಡಾಗುತ್ತಾ ಬಂದಿತ್ತು. ಶಮಾ ಚಿಕ್ಕ ಹುಡುಗಿ. ತನ್ನ ಹೇಂಟೆಯನ್ನು ಹುಡುಕುತ್ತಿದ್ದಾಳೆ. ಯಾವತ್ತೂ ಮನೆಯ ಸುತ್ತಲೂ ಇರುತ್ತಿದ್ದ ಹೇಂಟೆ ಇಂದು ಕಣ್ಣು ಹಾಯಿಸಿದರೂ ಗೋಚರಿಸುತ್ತಿರಲಿಲ್ಲ. ಈಕೆ ಬಹಳ ಚಿಂತಿತಳಾಗಿದ್ದಳು. ಏಕೆಂದರೆ ಅವಳು ಬಹಳ ಪ್ರೀತಿಯಿಂದ ಸಾಕಿದ ಹೇಂಟೆಯಾಗಿತ್ತದು. ಅಲ್ಲದೆ ಕೆಲವು ದಿನಗಳ ಹಿಂದೆ ಅದು ಮುದ್ದು ಮುದ್ದಾದ ಏಳು ಮರಿಗಳಿಗೆ ಜನ್ಮ ನೀಡಿತ್ತು. 'ಕುಕ್ ಕುಕ್' ಎನ್ನುತ್ತಾ ಈ ಮರಿಗಳು ತಾಯಿಯ ಸುತ್ತಲೂ, ತಿರುಗುತ್ತಾ ಓಡುತ್ತಾ ಆಡುತ್ತಿದ್ದುವು. ಸೂರ್ಯ ನೆತ್ತಿಗೆ ಬಂದರೂ ಈ ಹೇಂಟೆ ಮತ್ತು ಮರಿಗಳ ಪತ್ತೆಯಿಲ್ಲ. ಶಮಾ ಹುಡುಕಿ ಹುಡುಕಿ ಸುಸ್ತಾಗಿ ಬಿಟ್ಟಿದ್ದಳು.

ದಾರಿಯಲ್ಲಿ ಗೆಳತಿ ಶ್ಯಮಾ ಸಿಕ್ಕಿದಾಗ "ಏ ಶ್ಯಮಾ, ನನ್ನ ಹೇಂಟೆಯನ್ನು ನೋಡಿದ್ದೀಯಾ? ತುಂಬಾ ಸಮಯದಿಂದ ಹುಡುಕುತ್ತಿದ್ದೇನೆ. ಎಲ್ಲಿಗೆ ಹೋಗಿದೆಯೆಂಬುದೇ ಗೊತ್ತಾಗುತ್ತಿಲ್ಲಾ" ಎಂದು ಹೇಳಿದಾಗ, ಆಕೆ, "ನಾನು ನೋಡಿಲ್ಲಪ್ಪ" ಎಂದು ಹೇಳಿ ಏನೋ ಅರ್ಜೆಂಟ್ ಕೆಲಸ ಇದ್ದವಳಂತೆ ನಡೆದುಬಿಟ್ಟಳು. ಯಾರಿಗೂ ನನ್ನ ಕೋಳಿಯ ಪರಿವೆಯೇ ಇಲ್ಲ. ಪಾಪ ಏನಾಗಿದೆಯೋ? ಎಲ್ಲಾದರೂ ನರಿ ಹಿಡಿದಿರಬಹುದೇ ಎಂದು ಚಿಂತಿಸುತ್ತಿದ್ದಂತೆಯೇ ದೂರದಿಂದ ಬರುವ ಬಸ್ಸಿನ ಚಕ್ರವನ್ನೇ ದಿಟ್ಟಿಸಿ ನೋಡಿದಳು. ಅದರ ಚಕ್ರದಲ್ಲಿ ಕೆಂಪು ಬಣ್ಣ ಕಾಣಿಸಿತು. 'ಅಯ್ಯೋ ನನ್ನ ಕೋಳಿ ಮರಿ ಈ ಬಸ್ಸಿನ ಅಡಿಗೆ ಬಿದ್ದು ಸತ್ತಿರಬಹುದೇ?' ಬಸ್ಸು ಹತ್ತಿರ ಬಂದಾಗ "ಇಲ್ಲ... ಇಲ್ಲ. ಅದು ರಕ್ತವಲ್ಲ. ಹೋಳಿ ಹಬ್ಬದ ರಂಗು ಬಸ್ಸಿನ ಚಕ್ರಕ್ಕೆ ತಾಗಿದೆ" ಎಂದು ಅರಿತು ನಿಟ್ಟುಸಿರು ಬಿಟ್ಟಳು. ಪಾಪ ಚಿಕ್ಕ ಹುಡುಗಿಯಲ್ಲವೇ, ಈ ದಿಗ್ಭ್ರಮೆ ಸಹಜ.

ಶಾಲೆಗೆ ರಜೆ ಸಿಕ್ಕಿದ್ದರಿಂದ ಶಮಾ ಕೋಳಿಯ ಮೇಲೆ ವಿಶೇಷ ಆಸಕ್ತಿ ವಹಿಸಿದ್ದಳು. ಮಧ್ಯಾಹ್ನವಾದರೂ ಕೋಳಿಯ ಪತ್ತೆಯಿಲ್ಲ. ಹಸಿವೆಯಿಂದ ಮನೆಯೆಡೆಗೆ ನಡೆದಳು. ದಾರಿಯಲ್ಲಿ ವಾಸನೆಯೊಂದು ಮೂಗಿಗೆ ಬಡಿಯುತ್ತದೆ. ಹಾಂ..! ಮಾಂಸದ ಪದಾರ್ಥ. 'ಅಯ್ಯೋ ನನ್ನ ಹೇಂಟೆಯನ್ನು ಯಾರಾದರೂ ಪದಾರ್ಥ ಮಾಡಿರಬಹುದೇ? ಹೌದು, ಇದು ಕೋಳಿಯದೇ ಪದಾರ್ಥ, ಅದರದೇ ವಾಸನೆ'

ಎಂದು ಮನೆಯೆಡೆಗೆ ನಡೆದಳು. ಇಲ್ಲ ಇಲ್ಲ, ಅದು ರೈಮಾನಜ್ಜನ ಮನೆ. ಅವರು ಹಾಗೆ ಮಾಡಲಾರರು. ರೈಮಾನಜ್ಜ ಬಹಳ ಒಳ್ಳೆಯ ಮನುಷ್ಯ, ಅವರು ಅಲ್ಲಾಹನನ್ನು ಹೆಚ್ಚು ಭಯ ಪಡುತ್ತಾರೆ. ಹೇಂಟೆಯನ್ನು ಪದಾರ್ಥ ಮಾಡುವುದು ಬಿಡಿ, ನನ್ನ ಹೇಂಟೆಗೆ ಚಿಕ್ಕ ಮುಳ್ಳು ತಾಗುವುದನ್ನು ಕೂಡಾ ಸಹಿಸದ ಮನುಷ್ಯ. ಛೆ! ಛೆ! ಅಂತಹವರ ಮೇಲೆ ಸಂಶಯ ಪಡಬಾರದು' ಎಂದುಕೊಳ್ಳುತ್ತಾ ತನ್ನ ಮನೆಯೆಡೆಗೆ ಹಿಂದಿರುಗುವಷ್ಟರಲ್ಲೇ ಹೇಂಟೆಯ ಒಂದೆರಡು ಪುಕ್ಕಗಳು ರೈಮಾನಜ್ಜನ ಮನೆಯ ಮುಂದೆ ಕಂಡಿತು. ಈಕೆಗೆ ಸ್ವಲ್ಪ ಮಟ್ಟಿನ ಸಂಶಯ ಮನದಲ್ಲುಂಟಾಯಿತು. ಆಗಲೇ ಒಂದು ವಟಗುಟ್ಟುವ ಶಬ್ದ ಕೇಳಿಸಿತು. ಹತ್ತಿರ ಹೋದಾಗ 'ಕುಕ್ ಕುಕ್' ಎಂಬ ಶಬ್ದ ಕೇಳ ತೊಡಗಿತು. ಶಮಾ ಸುತ್ತ ಕಣ್ಣು ಹಾಯಿಸಿದಳು. ಎತ್ತ ನೋಡಿದರೂ 'ಕುಕ್ ಕುಕ್' ಕೇಳುತ್ತದೆಯೇ ಹೊರತು ಎಲ್ಲಿಂದ ಬರುತ್ತಿದೆ ಎಂದು



ತಿಳಿಯುತ್ತಿರಲಿಲ್ಲ. ಶಮಾ ಆಕಾಶದತ್ತ ಮುಖ ಎತ್ತಿದಳು. ಆಕಾಶದಲ್ಲಿ ಗಿಡುಗಗಳು ಹಾರಾಡುತ್ತಿದ್ದುವು. ಅದೇ ಸಮಯಕ್ಕೆ ರೈಮಾನಜ್ಜ ಝುಹರ್ ನಮಾಝ್ ಮುಗಿಸಿ ಮನೆಯೆಡೆಗೆ ಬಂದರು. ಹತ್ತಿರದಲ್ಲಿ ನಿಂತಿದ್ದ ಶಮಾಳಿಗೆ ಸಲಾಮ್ ಹೇಳಿದರು. "ಏನು ಶಮಾ, ಏನು ಹುಡುಕುತ್ತಿರುವೆ" ಎಂದು ಪ್ರೀತಿಯಿಂದ ಕೇಳಿದರು. "ರೈಮಾನಜ್ಜ, ನನ್ನ ಹೇಂಟೆ ಕಾಣುತ್ತಿಲ್ಲ. ಇಲ್ಲಿ ಹತ್ತಿರದಲ್ಲಿ ಅದರ ಮರಿಗಳ ಸದ್ದು ಕೇಳಿಸುತ್ತದೆ. ಎಲ್ಲಿ ಎಂಬುದೇ ಗೊತ್ತಾಗುತ್ತಿಲ್ಲ." ರೈಮಾನಜ್ಜ ಹತ್ತಿರದ ದೊಡ್ಡ ಕಲ್ಲಿನ ಹಿಂದೆ ಇಣುಕಿ ನೋಡಿದರು. ಕಲ್ಲಿನ ರಾಶಿಯ ಮೂಲೆಯಲ್ಲಿ ಹೇಂಟೆ ಅಡಗಿ ಕುಳಿತಿತ್ತು. ಹೇಂಟೆಯ ಮೈ ಮೇಲೆ ಪುಟ್ಟ ಗಾಯವಾಗಿತ್ತು. ಇದನ್ನು ಕಂಡು ಶಮಾಳಿಗೆ ಬಹಳ ದುಃಖವಾಗಿ ಅಳು ಉಮ್ಮಳಿಸಿ ಬಂತು. ಆಕೆಗೆ ತನ್ನ ಹೇಂಟೆಗೇನಾಗಿದೆ ಎಂಬುದೇ ಗೊತ್ತಾಗಲಿಲ್ಲ. ರೈಮಾನಜ್ಜ ಮೂಲೆಗೆ ಕೈ ಹಾಕಿ ಹೇಂಟೆಯನ್ನು ಎತ್ತಿದರು. ಅದರ ರೆಕ್ಕೆಯಡಿಯಲ್ಲಿ ಅವಿತು ಕುಳಿತಿದ್ದ ಮರಿಗಳೆಲ್ಲಾ ಸ್ವಾತಂತ್ರ್ಯ ಸಿಕ್ಕಂತೆ ಕುಕ್ ಕುಕ್ ಎನ್ನುತ್ತಾ ಹೊರಬಂದುವು. ಶಮಾ ಒಮ್ಮೆ ಮರಿಗಳನ್ನೇ ದಿಟ್ಟಿಸಿ ನೋಡಿದಳು. ಅದರಲ್ಲಿ ಕೆಂಪು ಬಣ್ಣದ ಚೆಂದದ ಮರಿ ಕಾಣೆಯಾಗಿತ್ತು. ಶಮಾ ಹೇಂಟೆಯನ್ನು ಹಿಡಿದು ಅಜ್ಜಿಗೆ ತೋರಿಸಿದಳು. ಅಜ್ಜಿಗೆ ವಿಷಯ ಅರ್ಥವಾಯಿತು.

ಅಜ್ಜಿ ಹೇಳಿದರು, ತನ್ನ ಮರಿಗಳನ್ನು ರಕ್ಷಿಸಲಿಕ್ಕಾಗಿ ಹೇಂಟೆ ಗಿಡುಗನೊಂದಿಗೆ ಹೋರಾಡಿದೆ. ಆದ್ದರಿಂದಲೇ ಅದರ ಮೈಯಲ್ಲಿ ಗಾಯವಾಗಿದೆ. ಪಾಪ ಮರಿಗಳ ಮೇಲೆ ಎಷ್ಟು ಪ್ರೀತಿ ಹೇಂಟೆಗೆ? ತಾಯಿಯ ಪ್ರೀತಿಯೆಂದರೆ ಹೀಗೆಯೇ. ತನ್ನ ಮಕ್ಕಳಿಗಾಗಿ ಎಂತಹ ಕಷ್ಟವನ್ನೂ ಸಹಿಸುತ್ತಾಳೆ. ತಾನು ಹಸಿದಿದ್ದರೂ ತನ್ನ ಮಕ್ಕಳ ಹೊಟ್ಟೆ ತುಂಬಿಸುತ್ತಾಳೆ. ಅದಕ್ಕಾಗಿಯೇ ಪ್ರವಾದಿ ಮಹಮ್ಮದ್‌ರು(ಸ), ಸದ್ವರ್ತನೆಗೆ ಹೆಚ್ಚು ಅರ್ಹರು ತಾಯಿಯೆಂದು ಮೂರು ಬಾರಿ ಪುನರಾವರ್ತಿಸಿ ಹೇಳಿದ್ದಾರೆ" ಎಂದು ಶಮಾಳಿಗೆ ಹೇಳಿದಾಗ ಮನೆಯ ಹಿಂಬದಿಯ ಅಂಗಣದಲ್ಲಿ ತಂಗಿಯನ್ನು ಸ್ನಾನ ಮಾಡಿಸುತ್ತಿದ್ದ ತಾಯಿಯನ್ನು ಶಮಾ ಪ್ರೀತಿಯಿಂದ ನೋಡಿದಳು. ತಾಯಿಯ ಹಿಂದೆ ಹೇಂಟೆ ಮತ್ತು ಮರಿಗಳು ಖುಷಿಯಿಂದ ಆಡುತ್ತಿದ್ದವು.

❖

## 10 ಆಡಿನ ಮರಿ

ಶುಜ್ಜನ ಮನೆಗೆ ಒಂದು ಆಡಿನ ಮರಿಯನ್ನು ತರಲಾಗಿತ್ತು. ಕುರ್ಬಾನಿಗೆ ಕೊಡುವುದೇ ಅದರ ಉದ್ದೇಶವಾಗಿತ್ತು. ಆದರೆ ಶುಜ್ಜನಿಗೆ ಯಾಕೆ ಆಡನ್ನು ತಂದಿದ್ದಾರೆ ಎಂಬುದು ತಿಳಿದಿರಲಿಲ್ಲ. ಆಡು ಬಂದ ಖುಷಿಯಲ್ಲಿ ಶುಜ್ಜ ಲೋಕವನ್ನೇ ಮರೆತಂತೆ ವರ್ತಿಸುತ್ತಿದ್ದ. ಅದರ ಮೇಲೆ ಅವನಿಗೆ ಎಲ್ಲಿಲ್ಲದ ಪ್ರೀತಿ. ಆಡಿನ ಮರಿಯನ್ನು ಕಂಡ ಮೊದಲ ನೋಟದಲ್ಲೇ 'ಮೂಸೆಕುಟ್ಟಿ' ಎಂದು ಹೆಸರಿಟ್ಟಿದ್ದ. ಈ ಹೆಸರು ಅವನ ಹೃದಯದಿಂದಲೇ ಹೊರಟದ್ದಾಗಿತ್ತು. ನಂತರ ಊರಿನಲ್ಲೆಲ್ಲಾ 'ಮೂಸೆಕುಟ್ಟಿ - ಮೂಸೆಕುಟ್ಟಿ' ಅಂತಲೇ ಹೆಸರುವಾಸಿ ಆಯಿತು. ಈಗ ಶುಜ್ಜನ ಆಟವೆಲ್ಲಾ ಆ ಆಡಿನೊಂದಿಗೆ. ದಿನಾಲೂ ಮೇಯಿಸುವುದೂ, ಎಲೆ ಹಾಕುವುದು, ಚಾಕರಿ ಮಾಡುವುದು ಅವನ ರೂಢಿಯಾಗಿತ್ತು. ಮೂಸೆಕುಟ್ಟಿಯೂ ಇವನನ್ನು ಬಹಳ ಹಚ್ಚಿಕೊಂಡಿತ್ತು. ಶುಜ್ಜನನ್ನು ಕಂಡರೆ ಸಾಕು ಕಿವಿ ನಿಮಿರಿಸಿ, ಕಾಲುಗಳನ್ನೆತ್ತಿ ದೇಹವನ್ನೆಲ್ಲಾ ಕುಲುಕಿಸಿ ಇವನತ್ತ ಓಡಿ, ಜಿಗಿದು ಬರುತ್ತಿತ್ತು. ಶುಜ್ಜನೊಂದಿಗೆ ಆಟವಾಡುವುದು, ಕಾಲೆತ್ತಿ ಹಣೆಯಿಂದ ಗುದ್ದಿದಂತೆ ನಟಿಸುವುದು ಹೀಗೆಲ್ಲಾ ಅವರಿಬ್ಬರ ಪ್ರೀತಿ ಗಾಢವಾಗುತ್ತಾ ಸಾಗುತ್ತಿತ್ತು.

ಶುಜ್ಜ ತನ್ನ ಮನೆಯ ಹಲಸಿನ ಮರಕ್ಕೆ ಮೂಸೆಕುಟ್ಟಿಯನ್ನು ಕಟ್ಟಿ ಶಾಲೆಗೆ ಹೋಗುತ್ತಿದ್ದನು. ಈತ ಶಾಲೆಗೆ ಹೋಗುವಾಗ ಮೂಸೆಕುಟ್ಟಿ ಈತನನ್ನೇ ನೋಡುತ್ತಿತ್ತು. ಬಹುಶಃ 'ನನ್ನ ಶುಜ್ಜ ಸುರಕ್ಷಿತನಾಗಿ ಹೋಗಿ ಬರಲಿ' ಎಂದು ಪ್ರಾರ್ಥಿಸುತ್ತಿರಬೇಕು."ಶಾಲೆಯಿಂದ ಬಂದು ನನ್ನನ್ನು ಹತ್ತಿರದ ಗುಡ್ಡ ಪ್ರದೇಶಕ್ಕೆ ಕೊಂಡೊಯ್ಯುತ್ತಾನೆ, ಸುತ್ತಾಡಿಸುತ್ತಾನೆ. ಅಲ್ಲಿ ಆಮಿನಾಕುಟ್ಟಿ ನನಗಾಗಿ ಕಾಯುತ್ತಿರುತ್ತಾಳೆ. ಅವಳೊಂದಿಗೆ ಬಹಳ ಮಾತನಾಡಲಿಕ್ಕಿದೆ..." ಇತ್ತ ಆಮಿನಾಕುಟ್ಟಿ ಮತ್ತು ಮೂಸೆಕುಟ್ಟಿ ಪಟ್ಟಾಂಗ ಹೊಡೆಯುತ್ತಿದ್ದರೆ ಶುಜ್ಜ ಮತ್ತು ಸ್ನೇಹಿತ ಚಂದ್ರು, ದಿನದ ಪಾಠಗಳ ಕುರಿತು ಚರ್ಚೆ ನಡೆಸುತ್ತಿದ್ದರು.

ದಿನಕಳೆದಂತೆ ಮೂಸೆಕುಟ್ಟಿ ದಷ್ಟಪುಷ್ಟವಾಗಿ ಬೆಳೆಯುತ್ತಿದ್ದ. ಶುಜ್ಜನಷ್ಟೇ ಎತ್ತರಕ್ಕೆ. ಆದರೂ ಇಂದಿಗೂ ಅವರ ಪ್ರೀತಿಯಲ್ಲಿ ಹೆಚ್ಚಳವಾಗಿದೆಯೇ ವಿನಃ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಈಗಲೂ ಆತನ ಶಬ್ದ ಕೇಳಿದರೆ ತಡ ಈತನ ಹತ್ತಿರ

ಬಂದು ಮೈಯನ್ನೆಲ್ಲಾ ಚುಂಬಿಸುತ್ತಿತ್ತು. ಕುರ್ಬಾನಿಯ ಸಮಯ ಹತ್ತಿರವಾಗುತ್ತಾ ಬರುತ್ತಿತ್ತು. ತಂದೆಯವರು, "ಮೂಸೆಕುಟ್ಟಿಯನ್ನು ಈ ಬಾರಿ ದೇವನಿಗೆ ಅರ್ಪಿಸಬೇಕು" ಎಂದು ಶುಜ್ಜನಲ್ಲಿ ಮಸ್ಕ ಹಾಕಿದ ರೀತಿಯಲ್ಲಿ ಹೇಳಿದರು. ಆಗಲೇ ಶುಜ್ಜನ ಮುಖ ಕಳೆಗುಂದಿತು. "ಖಂಡಿತಾ ಸಾಧ್ಯವಿಲ್ಲ, ನನ್ನ ಮೂಸೆಕುಟ್ಟಿಯನ್ನು ಅಷ್ಟು ಸುಲಭದಲ್ಲಿ ಯಾರಿಗೂ ಬಿಟ್ಟು ಕೊಡಲಾರೆ. ಮೂಸೆಕುಟ್ಟಿ ನನ್ನವನು. ಯಾರಿಂದಲೂ ನಮ್ಮಿಬ್ಬರನ್ನು ಬೇರ್ಪಡಿಸಲು ಸಾಧ್ಯವಿಲ್ಲ" ಎಂದು ಮನದಲ್ಲೇ ಶುಜ್ಜ ತಂದೆಗೆ ದೃಢವಾಗಿ ಪ್ರತ್ಯುತ್ತರ ಕೊಟ್ಟಿದ್ದನು. ಆದರೂ ಈತನಿಗೆ ತಂದೆಯ ಮೇಲೆ ಭಯವಿತ್ತು. ಕುರ್ಬಾನಿಯ ದಿನ ಹತ್ತಿರವಾಗುತ್ತಾ ಬರುತ್ತಿತ್ತು. ಶುಜ್ಜನಿಗೆ ಈಗ ಯಾವುದರಲ್ಲೂ ಆಸಕ್ತಿಯಿಲ್ಲ. ಮೂಸೆಕುಟ್ಟಿಯನ್ನು ಕಂಡಾಗಲೇ ಅವನ ಕಣ್ಣುಗಳು ಮಂಜಾಗುತ್ತಿದ್ದುವು. ಮೂಸೆಕುಟ್ಟಿಗೂ ಈತನ ಮನೋವೇದನೆ ಅರ್ಥವಾಗುವಂತೆ ಮುಖದಲ್ಲಿ ಬೇಸರದ ಛಾಯೆ ಗೋಚರಿಸುತ್ತಿತ್ತು.

ಒಂದು ದಿನ ಶುಜ್ಜ ಯಾವುದೋ ಕೆಲಸದ ಕಾರಣ ತನ್ನ ಅಜ್ಜಿ ಮನೆಗೆ ತಂಗಲು ಹೋಗಿದ್ದ. ಇನ್ನೇನು ಕುರ್ಬಾನಿಗೆ ಐದು ದಿನಗಳು ಮಾತ್ರ ಬಾಕಿಯಿತ್ತು. ಶುಜ್ಜ



ಅಜ್ಜಿಯೊಂದಿಗೆ,"ಅಜ್ಜಿ ಅಪ್ಪನವರಿಗೆ ಸ್ವಲ್ಪವೂ ಕರುಣೆಯಿಲ್ಲ. ಅವರು ಮೂಸೆಕುಟ್ಟಿಯನ್ನು ದೇವರಿಗೆ ಅರ್ಪಿಸುತ್ತಾರಂತೆ" ಎಂದು ತನ್ನ ನೋವನ್ನು ತೋಡಿದ್ದ.

"ಹಾಗೆಲ್ಲಾ ಹೇಳಬಾರದು ಕಂದಾ! ಅಪ್ಪನಿಗೂ ಅದರ ಮೇಲೆ ಬಹಳ ಪ್ರೀತಿಯಿದೆ. ಆದ್ದರಿಂದಲೇ ಅದನ್ನು ದೇವನಿಗೆ ಅರ್ಪಿಸುತ್ತಿದ್ದಾರೆ. ನಾವು ಯಾವುದನ್ನು ಹೆಚ್ಚು ಪ್ರೀತಿಸುತ್ತೇವೋ ಅದನ್ನೇ ದೇವನಿಗೆ ಅರ್ಪಿಸಿದರೆ ಅವನು ಹೆಚ್ಚು ಸಂತೋಷಗೊಳ್ಳುತ್ತಾನೆ. ನಮ್ಮನ್ನು ಹೆಚ್ಚು ಪ್ರೀತಿಸುತ್ತಾನೆ. ದೇವನು ನಮ್ಮ ಮನಸ್ಸನ್ನು ನೋಡುತ್ತಾನೆಯೇ ಹೊರತು ಅವನಿಗೆ ಅದರ ರಕ್ತ, ಮಾಂಸ ಬೇಕಾಗಿಲ್ಲ" ಎಂದು ಹೇಳಿದರು."ಅದೆಲ್ಲಾ ನನಗೆ ಗೊತ್ತಿಲ್ಲ. ಮೂಸೆಕುಟ್ಟಿಯನ್ನು ನನ್ನಷ್ಟು ಯಾರೂ ಪ್ರೀತಿಸುವುದಿಲ್ಲ. ಖಂಡಿತ ನನ್ನ ಮೂಸೆಕುಟ್ಟಿಯನ್ನು ಕುರ್ಬಾನಿಗೆ ಬಿಡಲಾರೆ. "ಹಠದಲ್ಲೇ ಹೇಳಿದ. ನೋಡು ಶುಜ್ಜ, ನಿನಗೊಂದು ಘಟನೆ ಹೇಳುತ್ತೇನೆ.

"ಒಂದು ಕಾಲದಲ್ಲಿ ಇಬ್‌ರಾಹೀಮ್(ಅ) ಎಂಬ ಮಹಾನ್ ಪ್ರವಾದಿ ಇದ್ದರು. ಅವರ ಪ್ರಾರ್ಥನೆಯನ್ನು ದೇವನು ಮೆಚ್ಚಿ ವೃದ್ಧಾಪ್ಯದಲ್ಲಿ ಅವರಿಗೊಬ್ಬ ಮಗನನ್ನು ದಯಪಾಲಿಸಿದನು. ಮಗನ ಹೆಸರು ಇಸ್ಮಾಈಲ್(ಅ). ಇಬ್‌ರಾಹೀಮ್(ಅ) ತನ್ನ ಮಗನನ್ನು ಬಹಳ ಪ್ರೀತಿಯಿಂದ ಸಾಕಿದ್ದರು. ಮಗನಿಗೆ ಹನ್ನೆರಡು ವರ್ಷ ಪ್ರಾಯವಾಗುತ್ತಲೇ ಅಲ್ಲಾಹನ ಮಾರ್ಗದಲ್ಲಿ ಬಲಿಯರ್ಪಿಸಬೇಕೆಂಬ ಆಜ್ಞೆ ಬಂತು. ಕೂಡಲೇ ಮಗನನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ಅವನಿಗೆ ತಿಳಿಸಿದರು ಆಗ ಇಸ್ಮಾಈಲ್(ಅ), ಅಪ್ಪಾ! ನೀವೇನೂ ಚಿಂತಿಸಬೇಡಿ. ನನ್ನ ಕಣ್ಣಿಗೆ ಪಟ್ಟಿ ಕಟ್ಟಿ. ನಿಮಗೆ ಅಲ್ಲಾಹನು ಏನನ್ನು ಆಜ್ಞಾಪಿಸಿದನೋ ಅದನ್ನು ನೆರವೇರಿಸಿರಿ ಎಂದು ಧೈರ್ಯ ಹೇಳಿ ಕುತ್ತಿಗೆ ತೋರಿಸಿದರು. ಆಗ ಇಸ್ಮಾಈಲರಿಗೆ(ಅ) ನಿನ್ನಷ್ಟೇ ಪ್ರಾಯವಾಗಿರಲೂಬಹುದು." ಅಜ್ಜಿ ಕತೆ ಮುಂದುವರಿಸಿದರು. ನೋಡು ಶುಜ್ಜಾ, ಇಬ್‌ರಾಹೀಮ್(ಅ) ಯಾವ ರೀತಿ ತನ್ನ ಮಗನನ್ನು ಸಾಕಿ ತರಬೇತಿಗೊಳಿಸಿದ್ದರೋ ನೀನು ಕೂಡಾ ನಿನ್ನ ಮೂಸೆಕುಟ್ಟಿಯನ್ನು ಅದೇ ರೀತಿ ಸಾಕಿದ್ದಿಯಾ. ಒಂದು ವೇಳೆ ಮೂಸೆಕುಟ್ಟಿಗೆ ಬಾಯಿ ಬರುತ್ತಿದ್ದರೆ ಅದೂ ಕೂಡಾ ಇದೇ ರೀತಿ ಉತ್ತರಿಸುತ್ತಿತ್ತು" ಎಂದು ಅಜ್ಜಿ ಮನಮುಟ್ಟುವಂತೆ ವಿವರಿಸಿದರು. ಶುಜ್ಜನ ಹೃದಯಕ್ಕೆ ಈ ಮಾತುಗಳು ಬಾಣದಂತೆ ನಾಟಿದುವು.

ಇಸ್ಮಾಈಲ್‌ರ(ಅ) ತ್ಯಾಗವು ಶುಜ್ಜನ ಮೇಲೆ ಬಹಳ ಪ್ರಭಾವ ಬೀರಿತ್ತು. ಮೂರು ದಿನದ ನಂತರ ಶುಜ್ಜ ಅಜ್ಜಿ ಮನೆಯಿಂದ ತನ್ನ ಮನೆಗೆ ತೆರಳಿದನು.

ಈತನನ್ನು ಕಂಡೊಡನೆ ಮೂಸೆಕುಟ್ಟಿ ಎದ್ದು ನಿಂತು ಹತ್ತಿರ ಬಂದು ತಲೆಯನ್ನು ಶುಜ್ಜನಿಗೆ ಒಪ್ಪಿಸಿತು. ಶುಜ್ಜ ಪ್ರೀತಿಯಿಂದ ಅದರ ತಲೆಯನ್ನು ನೇವರಿಸ ತೊಡಗಿದನು. ಶುಜ್ಜನನ್ನು ಕಂಡ ತಂದೆಯವರು "ಮೂಸೆಕುಟ್ಟಿಯನ್ನು ಮಸೀದಿಯ

ಉಸ್ತಾದರು ಕೊಂಡು ತರಲು ಹೇಳಿದ್ದಾರೆ. ಕೊಂಡು ಹೋಗೋಣಲ್ಲವೇ..." ಎಂದು ನಯವಾಗಿ ಹೇಳಿದರು. ಶುಜ್ಜನಿಂದ ಏನೂ ಉತ್ತರವಿಲ್ಲ. ಮೌನ! ಶುಜ್ಜನನ್ನು ಸುಧಾರಿಸುವುದು ಬಹಳ ಕಷ್ಟ. ಹೇಗೆ ಅವನನ್ನು ಒಪ್ಪಿಸುವುದು ಎಂಬುದೇ ತಂದೆಯವರಿಗೆ ದೊಡ್ಡ ಚಿಂತೆಯಾಗಿತ್ತು. ಸ್ವಲ್ಪ ಸಮಯದ ನಂತರ ಶುಜ್ಜನೇ ಮೂಸೆಕುಟ್ಟಿಯ ಹೆಗಲ ಮೇಲೆ ಇರುವ ಹಗ್ಗವನ್ನು ಹಿಡಿದು ಕೊಂಡು ಸೀದಾ ಹೊರಗೆ ನಡೆದು ಬಿಟ್ಟನು. ತಂದೆಯವರಿಗೂ ಕುತೂಹಲ ಕಾದಿತ್ತು. ಆತನನ್ನೇ ಹಿಂಬಾಲಿಸುತ್ತಾ ಹೋದರು. ಶುಜ್ಜನ ಕಣ್ಣುಗಳು ತೇವಗೊಂಡಿದ್ದುವು. ಹೀಗೆ ನಡೆಯುತ್ತಿರುವಾಗ ಮೂಸೆಕುಟ್ಟಿಯ ಬಾಲ್ಯದ ಓಡಾಟ, ಜಿಗಿತ, ನಟನೆ ಈತನ ಮುಂದೆ ಬಂತು. ಪೆದ್ದು ಪೆದ್ದಾಗಿ ಮಾಡುವಂತಹ ದೃಶ್ಯ ಶುಜ್ಜನ ಮನದಲ್ಲಿ ಮತ್ತೆ ಮತ್ತೆ ಮರುಕಳಿಸುತ್ತಿತ್ತು. ಮೂಸೆಕುಟ್ಟಿಯನ್ನು ಹಿಡಿದು ಉಸ್ತಾದರ ಎದುರು ತಂದು ನಿಲ್ಲಿಸಿದನು. ಮೂಸೆಕುಟ್ಟಿಯೂ ವಿಧೇಯನೆಂಬಂತೆ ಈತನನ್ನೇ ಅನುಸರಿಸುತ್ತಿತ್ತು. ಮೂಸೆಕುಟ್ಟಿಯನ್ನು ನೋಡುವಾಗ ಈತನಿಗೆ ಇಸ್ಮಾಈಲರ(ಅ) ಅದೇ ಘಟನೆ ನೆನಪಾಗುತ್ತಿತ್ತು. ಉಸ್ತಾದರು ಶುಜ್ಜನನ್ನು ನೋಡಿ ಸಂತೋಷಗೊಂಡರು ಮತ್ತು ಮೂಸೆಕುಟ್ಟಿಯನ್ನು ಹಿಡಿದು ಕುರ್ಬಾನಿ ಮಾಡಿಯೇ ಬಿಟ್ಟರು. ಮೂಸೆಕುಟ್ಟಿ ರಕ್ತದ ಮಡುವಿನಲ್ಲಿ ಒದ್ದಾಡುತ್ತಿದ್ದಾನೆ. ಶುಜ್ಜ ಶುಜ್ಜ ಎಂದು ದೀನವಾಗಿ ರೋದಿಸುತ್ತಿದ್ದಾನೆ...... ಇದನ್ನು ಕಂಡು ಶುಜ್ಜನ ದುಃಖವು ಉಮ್ಮಳಿಸಿತು. ಅವನಿಗೆ ದುಃಖವನ್ನು ತಡೆಯಲು ಸಾಧ್ಯವಾಗಲಿಲ್ಲ. ದುಃಖದ ಕಟ್ಟೆಯೊಡೆದು ಜೋರಾಗಿ ಅಳಲಾರಂಭಿಸಿದನು. ಸ್ವಲ್ಪ ಸಮಯದ ನಂತರ ಮೂಸೆಕುಟ್ಟಿ ಸಂಪೂರ್ಣ ಮೌನವಾದನು. ಉಸ್ತಾದರು ಬಂದು ಶುಜ್ಜನ ಕಣ್ಣೊರೆಸಿ ಶುಜ್ಜನ ತಂದೆಯವರಲ್ಲಿ "ನನ್ನ 56ವರ್ಷ ಅನುಭವದಲ್ಲಿ ಅಲ್ಲಾಹನು ಮೆಚ್ಚುವಂತಹ ಕುರ್ಬಾನಿಯನ್ನು ನೋಡಿದ್ದರೆ ಅದು ಶುಜ್ಜನ ಕುರ್ಬಾನಿ" ಎಂದು ಶುಜ್ಜನ ಬೆನ್ನು ತಟ್ಟಿ ಹೇಳಿದರು. ಶುಜ್ಜನ ದುಃಖಕ್ಕೆ ಇದು ಸಾಂತ್ವನದಂತೆ ಭಾಸವಾಯಿತು.

❖